ನೆಹರೂ ಬಾಲ ಪುಸ್ತಕಾಲಯ

# ಪಂಚಾಮೃತ

## ಮಕ್ಕಳ ಕಥೆಗಳು

ಸಂಕಲನ

**ಬಿ.ಎಸ್. ರುಕ್ಕಮ್ಮ**

ಚಿತ್ರಗಳು

**ಕೆ.ಆರ್. ಸುಬ್ಬಣ್ಣ**



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

1

# ಜಾಣರು ತೋಡಿದ ಬಾವಿ

**ಕುಮಾರ ವೆಂಕಣ್ಣ**

ಗಣಪತಿ ತುಂಬ ಪರೋಪಕಾರಿ. ಯಾರೇ ಸಹಾಯ ಕೇಳಲಿ ಅವನು ಸಹಾಯ ಮಾಡುತ್ತಿದ್ದ. ಆ ಹಳ್ಳಿಯಲ್ಲಿ ಏನು ಕೆಲಸವಾಗಬೇಕಾದರೂ ಗಣಪತಿ ಅಲ್ಲಿಗೆ ಓಡುತ್ತಿದ್ದ. ಗಣಪತಿ ಇದ್ದರೆ ಸಾಕು, ಎಲ್ಲ ಕೆಲಸ ಆಗಿ ಬಿಡುತ್ತದೆ ಎಂದು ರೈತರೂ ಹೇಳುತ್ತಿದ್ದರು.

ಧನಪ್ಪ ಗಣಪತಿಯ ಗೆಳೆಯ. ಅವನಿಗೆ ಎರಡು ಎಕರೆ ಹೊಲವೂ ಇತ್ತು. ತನ್ನ ಜಮೀನೆಂದರೆ ಅವನಿಗೆ ಪ್ರಾಣ. ಅದರಲ್ಲಿ ಹೆಚ್ಚು ಬೆಳೆಯಬೇಕು ಹೆಚ್ಚು ಹಣ ಸಂಪಾದಿಸಬೇಕು ಎಂಬುದು ಧನಪ್ಪನ ಆಸೆ.

ತನ್ನ ಹೊಲದಲ್ಲಿ ಒಂದು ಬಾವಿ ತೋಡಬೇಕು. ಅದರ ನೀರನ್ನು ಎತ್ತಿ ಹೆಚ್ಚು ಬೆಳೆ ಬೆಳೆಯಬೇಕು ಎಂದು ಧನಪ್ಪ ಯೋಚಿಸಿದ್ದ. ಆದರೆ ಬಾವಿ ತೋಡಲು ಸಹಾಯ ಬೇಡವೆ? ಹಣ ಖರ್ಚಾಗುವುದಿಲ್ಲವೇ? ಹಣ ಖರ್ಚು ಮಾಡಿದಾಗಲೂ ನೀರು ಸಿಗದಿದ್ದರೆ! ಹೀಗೆ ಧನಪ್ಪ ತುಂಬ ಯೋಚನೆ ಮಾಡಿದ.

ಅಂತೂ ಕೊನೆಗೆ ಗಣಪತಿಯ ಬಳಿ ತನ್ನ ಆಸೆಯನ್ನು ಹೇಳಿಕೊಂಡ. ಗಣಪತಿ ಕೂಡಲೇ ಸಹಾಯ ಮಾಡಲು ಒಪ್ಪಿದ. ಇಬ್ಬರೂ ಸೇರಿ ಹೊಲದ ಅಂಚಿನಲ್ಲಿ ಬಾವಿ ತೋಡಿದರು. ಉತ್ಸಾಹದಿಂದ ದುಡಿದರು. ವಿರಾಮವಿಲ್ಲದೆ ಕೆಲಸ ಮಾಡಿದರು. ಹತ್ತು ಅಡಿ ಆಳವೂ ಆಯಿತು. ಆದರೂ ನೀರು ಬರಲಿಲ್ಲ.

ಧನಪ್ಪನಿಗೆ ಚಿಂತೆ ಮೂಡಿತು.

"ಯಾಕೆ ಚಿಂತೆ. ನಾಳೆ ಕೊಂಚ ಅಗೆದರೆ ಸರಿ. ನೀರು ಬರುತ್ತದೆ" ಎಂದ ಗಣಪತಿ.

"ಅದೇನೋ ನಿಜ ಗಣಪತಿ. ಆದರೆ, ಇಲ್ಲಿ ರಾಶಿ ಬಿದ್ದಿರುವ ಈ ಮಣ್ಣು ನೋಡು. ಇದು ನನ್ನ ಜಮೀನಿನ ಮಣ್ಣು. ನಾಳೆ ಎಲ್ಲಾದರೂ ಮಳೆ ಬಂದರೆ ಇದು ಕೊಚ್ಚಿ ಹೋಗುತ್ತದೆ. ಬೇರೆಯವರ ಹೊಲ ಸೇರುತ್ತದೆ. ಅಂದರೆ, ನನಗೆ ನಷ್ಟವಾಯಿತಲ್ಲ? ಇದೇ ಚಿಂತೆ".

"ಅದಕ್ಕೇನು ಮಾಡೋಣ?"

"ನನಗೂ ಅದೇ ಯೋಚನೆಯಾಗಿದೆ. ಏನಾದರೂ ಉಪಾಯ ಹೇಳು".

"ಆಗಲಿ. ಈ ರಾತ್ರಿಯೆಲ್ಲ ಯೋಚಿಸೋಣ. ನಮ್ಮಲ್ಲಿ ಯಾರಿಗಾದರೊಬ್ಬರಿಗೆ ಉಪಾಯ ಹೊಳೆದೀತು" ಎಂದ ಗಣಪತಿ. ಇಬ್ಬರೂ ತಮ್ಮ ತಮ್ಮ ಮನೆಗೆ ಹೋದರು. ರಾತ್ರಿಯೆಲ್ಲ ಯೋಚಿಸಿದರು.

ರಾಶಿ ಬಿದ್ದ ಮಣ್ಣಿನದೇ ಚಿಂತೆ.

ಮರುದಿನ ಮುಂಜಾನೆ ಎಚ್ಚರವಾದೊಡನೆ ಗಣಪತಿಗೆ ಏನೋ ಯೋಚನೆ ಬಂತು. ಅವನ ಮುಖ ಅರಳಿತು. ಕೂಡಲೇ ಧನಪ್ಪನ ಮನೆಗೆ ಓಡಿ ಬಂದ.

"ಈಗ ಉಪಾಯ ಹೊಳೆಯಿತು. ಆ ಮಣ್ಣನ್ನೆಲ್ಲ ಭದ್ರವಾಗಿ ಇರಿಸಬಹುದು."

"ಹೇಗೆ? ಏನು ಉಪಾಯ?"

"ಅದೇನು ಮಹಾ? ಇನ್ನೊಂದು ಬಾವಿ ತೋಡಿದರೆ ಸರಿ, ಅದರಲ್ಲಿ ಈ ಮಣ್ಣನ್ನು ತುಂಬಿ ಬಿಡೋಣ."



"ನಿಜವಾಗೂ ಒಳ್ಳೆಯ ಯೋಚನೆ ಗಣಪತಿ" ಎಂದ ಧನಪ್ಪ. ಇಬ್ಬರೂ ಹೊಲಕ್ಕೆ ನಡೆದು ಮತ್ತೊಂದು ಬಾವಿ ತೋಡಿದರು. ಮೂರು ದಿನಗಳಲ್ಲಿ ಅದು ಸಿದ್ಧವಾಯಿತು. ಮೊದಲನೆಯ ಬಾವಿಯಿಂದ ತೆಗೆದ ಮಣ್ಣನ್ನೆಲ್ಲ ಅದರೊಳಗೆ ತುಂಬಿದರು. ಸಂತೋಷದಿಂದ ಮೀಸೆ ಹುರಿ ಮಾಡಿದರು.

ಧನಪ್ಪ ತಿರುಗಿ ನೋಡಿದ. ಎರಡನೆ ಬಾವಿಯಿಂದ ತೆಗೆದ ಮಣ್ಣು ಅಲ್ಲೇ ರಾಶಿಯಾಗಿ ಬಿದ್ದಿತ್ತು.

"ಇದೆಲ್ಲಿಂದ ಬಂತು?" ಎಂದ ಗಣಪತಿ.

"ಎರಡನೆಯ ಬಾವಿಯ ಮಣ್ಣು" ಎಂದ ಧನಪ್ಪ.

"ಒಳ್ಳೆಯ ಗ್ರಹಚಾರ ಬಂತಲ್ಲ. ಏನು ಮಾಡಿದರೂ ಈ ಮಣ್ಣು ನೆಲದೊಳಕ್ಕೆ ಹೋಗುವುದಿಲ್ಲವಲ್ಲ?" ಎಂದು ಚಿಂತೆಗೆ ಒಳಗಾದ ಗಣಪತಿ.

ಇಬ್ಬರೂ ಬಹಳವಾಗಿ ಯೋಚಿಸಿದರು. ಉಪಾಯ ಹೊಳೆಯಲಿಲ್ಲ. ಕತ್ತಲೂ ಆಯಿತು. ತಮ್ಮ ಮನೆಗಳಿಗೆ ನಡೆದರು.

ಮುಂಜಾನೆ ಗಣಪತಿ ಮತ್ತೊಮ್ಮೆ ಧನಪ್ಪನ ಮನೆಗೆ ಓಡಿದ. ಏನೋ ಯೋಚಿಸುತ್ತ ಧನಪ್ಪ ಕುಳಿತಿದ್ದ.

"ಏನು? ಉಪಾಯ ಹೊಳೆಯಿತೇ?"

"ಅಷ್ಟು ಹೊಳೆಯದಿರುತ್ತದೆಯೇ—ಧನಪ್ಪ? ಈ ಗಣಪತಿಯ ಬುರುಡೆ ಸಾಮಾನ್ಯವಲ್ಲ."

"ಏನು ಮಾಡೋಣ?"

"ಹಳೆ ಬಾವಿ ಎಷ್ಟು ಆಳವಿದೆ ಹೇಳು?"

"ಹತ್ತಡಿ ಇದೆ."

"ಈಗ ಇಪ್ಪತ್ತು ಅಡಿ ಆಳದ ಬಾವಿ ತೋಡೋಣ. ಎರಡು ಪಾಲು ಆಳವಾಗುತ್ತದೆ ಅಲ್ಲವೇ?"

"ಆಗ ಎರಡು ಬಾವಿಯ ಮಣ್ಣು ತುಂಬುತ್ತದೆ."

"ನಿಜವಾಗಿಯೂ ಬಂಗಾರದಂತಹ ಉಪಾಯ ಗಣಪತಿ. ನನಗೆ ಹೊಳೆಯಲೇ ಇಲ್ಲ" ಎಂದ ಧನಪ್ಪ. ಇಬ್ಬರೂ ಹೊಲಕ್ಕೆ ಹೋದರು. ಅಲ್ಲೇ ಪಕ್ಕದಲ್ಲಿ ಮತ್ತೊಂದು ಬಾವಿ ತೋಡಲು ಆರಂಭಿಸಿದರು. ಎಂಟು ದಿನಗಳು ಕಳೆದುವು. ಬಾವಿ ಸಿದ್ಧವಾಯಿತು.

"ಈಗ ಮೊದಲನೆಯ ಬಾವಿಯ ಮಣ್ಣನ್ನು ಇದರಲ್ಲಿ ತುಂಬೋಣ" ಎಂದ ಗಣಪತಿ. ಅದನ್ನು ತುಂಬಿಯಾಯಿತು. ಮರುದಿನ ಮೂರನೆಯ ಬಾವಿಯ ಮಣ್ಣನ್ನು ತುಂಬಿದರು. ಬಾವಿ ತುಂಬಿತು. ಆದರೂ ಮಣ್ಣಿನ ರಾಶಿ ಮುಗಿಯಲಿಲ್ಲ. ಇನ್ನೂ ಹತ್ತಡಿಯಷ್ಟು ಮಣ್ಣು ಉಳಿದಿತ್ತು.



“ನನ್ನ ಅದೃಷ್ಟ ಚೆನ್ನಾಗಿಲ್ಲ ಗಣಪತಿ. ನಷ್ಟದ ಗಳಿಗೆಯಲ್ಲೇ ನಾವು ಕೆಲಸ ಆರಂಭಿಸಿದ ಹಾಗಿದೆ”. ಧನಪ್ಪ ಚಿಂತಿಸಿದ.

“ಈಗ ಎರಡನೆ ಬಾವಿಯಲ್ಲಿ ಈ ಮಣ್ಣನ್ನು ತುಂಬೋಣ. ಮುಂದೆ ಒಳ್ಳೆಯ ದಿನ ನೋಡಿ ಬಾವಿ ಕೆಲಸ ಆರಂಭಿಸಿದರೆ ಸರಿ” ಎಂದ ಗಣಪತಿ.

ಇಬ್ಬರೂ ಎರಡನೆಯ ಬಾವಿಯನ್ನು ತುಂಬಿದರು. ಮಣ್ಣು ಭದ್ರವಾಯಿತು. ಬಾವಿಯೂ ಇಲ್ಲವಾಯಿತು.

2

# ಶ್ರೀಮಂತೆ ಆರಿಸಿಕೊಂಡ ಹುಡುಗಿ

**ಹೊಯ್ಸಳ**

ಒಬ್ಬಳು ಶ್ರೀಮಂತೆ. ಅವಳಿಗೆ ಮಕ್ಕಳೇ ಇರಲಿಲ್ಲ. ತುಂಬಾ ಹಣವಿತ್ತು. ಊರ ತುಂಬಾ ಅವಳದೇ ಮನೆ. ಆದರೆ ಆ ಶ್ರೀಮಂತೆಗೆ "ನೀನೆ" ಎಂಬ ಒಬ್ಬ ಹೆಣ್ಣು ಮಗಳೂ ಗತಿ ಇರಲಿಲ್ಲ.

ಆಕೆ ಒಂದು ಕೇರಿ ಕೇರಿ ಸುತ್ತುತ್ತ ಬಂದಳು. "ನನಗೊಬ್ಬಳು ಹೆಣ್ಣು ಮಗಳು ಬೇಕು. ನನ್ನ ಹಣಕಾಸು ಆಸ್ತಿಪಾಸ್ತಿಯೆಲ್ಲ ಅವಳ ಹೆಸರಿನಲ್ಲಿ ಬರೆದಿಟ್ಟು ನಾನು ಕಾಶಿಗೋ ರಾಮೇಶ್ವರಕ್ಕೊ ಹೋಗಿಬಿಡುತ್ತೇನೆ."

"ನನ್ನ ಆಸ್ತಿಪಾಸ್ತಿಗೆ ಯೋಗ್ಯಳಾದವಳು ಯಾವಳಿದ್ದಾಳೆ ಈ ಊರಲ್ಲಿ?" ಎಂದು ತನ್ನೂರೆಲ್ಲ ತಿರುಗಿದಳು. ಯಾರೂ ಸಿಗಲಿಲ್ಲ.

"ಅನ್ಯಾಯವಾಗಿ ಈ ಹಣವಂತೆಯ ಐಶ್ವರ್ಯವೆಲ್ಲ ಪರರ ಪಾಲಾಗುತ್ತದಲ್ಲ" ಎಂದು ಊರವರೆಲ್ಲ ಗೋಳಾಡಿದರು.

ಶ್ರೀಮಂತೆ ಮೇನಾದಲ್ಲಿ ಕೂತು ಬೇರೆ ಊರಿಗೆ ಹೋದಳು. ಅಲ್ಲಿ ಡಂಗೂರ ಹಾಕಿ ಹೀಗೆಂದು ಕೂಗಿಸಿದಳು. "ಈ ಊರಲ್ಲಿ ನನ್ನ ಐಶ್ವರ್ಯಕ್ಕೆಲ್ಲ ಭಾಗಿನಿಯಾಗುವಂಥಾ ಹೆಣ್ಣು ಯಾರಾದರೂ ಇದ್ದರೆ ಬರಲಿ."

ಯಾರೂ ಉತ್ತರ ಕೊಡಲಿಲ್ಲ. ಶ್ರೀಮಂತೆಯ ಐಶ್ವರ್ಯ ಅವಳದಲ್ಲ, ಅದೆಲ್ಲ ಅನುಭವಿಸುವಂಥಾ ಬಡಜನಗಳದ್ದು. ಕೆಲಸ ಮಾಡಿ ದುಡಿಯುತ್ತಿರುವ ಜನಕ್ಕೆ ಸೇರಿದ್ದು. ಉಳುವವನಿಗೆ ಗದ್ದೆ, ಅಗೆವವನಿಗೇ ತೋಟ, ಅನುವಾಗಿ ಜೀವಿಸುಕೊಂಡಿರುವವನಿಗೇ ಮನೆ. ಈ ಶ್ರೀಮಂತೆಗೆ ಏನೂ ಸೇರುವುದಿಲ್ಲ. ಕೇವಲ ಹೆಸರಿಗೆ ಮಾತ್ರ ಈಕೆ ಶ್ರೀಮಂತೆ.

ಇನ್ನೊಂದೂರಿಗೆ ಹೋದಳು ಶ್ರೀಮಂತೆ. "ಯಾರಿದ್ದಾರೆ ಈ ಊರಲ್ಲಿ ನನ್ನ ಅಪಾರ ಆಸ್ತಿಗೆ ಹಕ್ಕುದಾರಳಾಗುವವಳು!" ಎಂದು ಕೂಗು ಹಾಕುತ್ತಾ ಬಂದಾಗ್ಗೆ ಆ ಊರಿನ

ಶಾನುಭೋಗನ ಮಗಳು ಬಾಗಿಲಿಗೆ ರಂಗೋಲಿ ಚಿತ್ರ ಬರೆಯುತ್ತಿದ್ದವಳು ನೆಟ್ಟಗೆ ನಿಂತು ಕೇಳಿದಳು. "ಏನದು ನಿಮ್ಮ ಷರತ್ತು? ನಾನೇ ಇದ್ದೇನಲ್ಲ ಬಡತನಕ್ಕೆ ಬಡವಿ. ಸಿರಿತನಕ್ಕೆ ರಾಣಿ. ನನಗೆ ಕೊಡಿ ಆಸ್ತಿಯನ್ನೆಲ್ಲ."

ಆ ಮಾತಿನ ದಿಟ್ಟತನಕ್ಕೆ ಬೆರಗಾಗಿ ಶ್ರೀಮಂತೆ ಹೇಳಿದಳು ಹೀಗೆ — "ಹಾಗಿದ್ದರೆ ಹಿಡಿ ಈ ಮೊರದ ಭತ್ತ. ಈ ದಿನ ಇದಿಷ್ಟರಿಂದಲೇ ನನಗೆ ಅಡುಗೆ ಮಾಡಿ ಬಡಿಸು ಮಗಳೆ."

ಆ ಶಾನುಭೋಗನ ಮಗಳು ತನ್ನ ತಂದೆ ತಾಯಿಗೆ ನಮಸ್ಕರಿಸಿ ಆ ಶ್ರೀಮಂತೆಯ ಸಂಗಡ ಮೇನದಲ್ಲಿ ಕುಳಿತಳು. ಊರಾಚೆಯ ಛತ್ರದಲ್ಲಿ ಶಾನುಭೋಗನ ಮಗಳು ಒಂದು ಕೋಣೆಯಲ್ಲಿ ಬಿಡಾರ ಬಿಡಿಸಿಕೊಂಡಳು. ಶ್ರೀಮಂತೆ ಹೇಳಿದಳು — "ಹಿಡಿ ಈ ಭತ್ತವನ್ನು. ಈ ನನ್ನ ಆಳು ನಿನ್ನ ಕಾವಲಿಗೆ, ಮಧ್ಯಾಹ್ನಕ್ಕೆ ನನಗೆ ಊಟಕ್ಕೆ ಸಿದ್ಧಮಾಡು."

ಬಡ ಹುಡುಗಿ ನಗು ನಗುತ್ತ ಮೊರದ ಭತ್ತವನ್ನು ಕೈಗೆ ತೆಗೆದುಕೊಂಡು ಬಿಡಾರಕ್ಕೆ ಹೋದಳು. ಒನಕೆ ತಂದು ಭತ್ತ ಕುಟ್ಟಿ ಹೊಟ್ಟು ತೆಗೆದಳು. ಹೊಟ್ಟನ್ನು ಅಕ್ಕಸಾಲಿಗೆ ಕ್ರಯಕ್ಕೆ ಕೊಟ್ಟಳು. ಆ ಹಣದಿಂದ ಸೌದೆಯನ್ನೂ ತರಕಾರಿಯನ್ನೂ ತಂದಳು. ಸುಲಿದಕ್ಕಿಯನ್ನು ತೊಳಸಿ ತೌಡು ತೆಗೆದಳು. ಗೌಳಿಗರ ಮನೆಗೆ ಹೋಗಿ ಅದನ್ನು ಕೊಟ್ಟು ಅದರ ಬದಲು ಕೆನೆಮೊಸರು ತಂದಳು. ನುಚ್ಚು ತೆಗೆದು ಕೋಳಿ ಸಾಕುವವರಿಗೆ ಕೊಟ್ಟಳು. ಆ ಹಣದಿಂದ ಉಪ್ಪು, ಹುಳಿ, ಖಾರ, ಎಣ್ಣೆ ತಂದುಕೊಂಡಳು.

ಅಡುಗೆಗೆ ಒಲೆ ಹೊತ್ತಿಸಿ, ತರಕಾರಿ ಹೆಚ್ಚಿಟ್ಟು, ಹತ್ತಿರದ ಬಾವಿಯಿಂದ ನೀರು ತುಂಬಿಟ್ಟು ಹೂವಿಟ್ಟು "ಗಂಗೇ, ತುಂಗೇ, ಕಾವೇರೀ, ಕಾಪಾಡಿ ತಾಯಂದಿರೇ" ಎಂದು ನಮಸ್ಕಾರ ಮಾಡಿ ತನ್ನ ತಾಯಂದಿರಿಗೆ ಮನದಲ್ಲೆ ನಮಿಸಿ ನಿಂತು, ಕೂತು ಅಡುಗೆ ಮಾಡಿದಳು. ಮೊಸರು ಕಡೆದು ಬೆಣ್ಣೆ ತೆಗೆದಳು. ಅನ್ನ ಬಸಿದ ಗಂಜಿಯನ್ನು ತೋಟದವನಿಗೆ ಕೊಟ್ಟು ಎರಡೆಲೆಯನ್ನೂ ಐದೇ ವೀಳೆಯದೆಲೆಯನ್ನೂ ಒಂದು ಕಿತ್ತಲೆ ಹಣ್ಣನ್ನೂ ತಂದು ಸಿದ್ಧಳಾಗಿ ಶ್ರೀಮಂತೆಗೆ ಹೇಳಿಕಳಿಸಿದಳು.

ಈ ಬಡ ಹುಡುಗಿ, ಅಳುತ್ತಾ ಕುಳಿತಿರಬಹುದು, ಎಲ್ಲಿಂದಲಾದರೂ ಊಟ ತರಿಸೋಣ. ಪಾಪ ಇಷ್ಟಕ್ಕೆ ಒಪ್ಪಿದ್ದೇ ಸಾಕೆಂದು ಶ್ರೀಮಂತೆ ಮೇನದಲ್ಲಿ ಬಂದಿಳಿದಳು.

ಶಾನುಭೋಗನ ಮಗಳು ಬಾಗಿಲಿಗೆ ಬಂದಳು. ನಗುನಗುತ್ತಾ ಕಾಲಿಗೆ ಬೆಚ್ಚನೆ ನೀರು ಕೊಟ್ಟಳು. ಒಳಗೆ ಕರೆದುಕೊಂಡು ಮಣೆಯ ಮೇಲೆ ಕೂರಿಸಿದಳು. ಕುಡಿಬಾಳೆಲೆ ಹಾಕಿದಳು. ಬಡಿಸಿದಳು — ಉಪ್ಪು, ತುಪ್ಪ, ಅನ್ನ, ಸಾರು, ಚಟ್ನಿ, ಬೆಣ್ಣೆ, ಮಜ್ಜಿಗೆ.

ಶ್ರೀಮಂತೆಗೆ ಸುಖ ಭೋಜನವಾಯಿತು. ಊಟ ಮಾಡುತ್ತ ಆ ಬಾಲಿಕೆಯ ಒಪ್ಪ, ಓರಣ, ಶಿಂಗಾರವೆಲ್ಲ ಕಂಡು ನಲಿದಳು. ವೀಳ್ಯ ತೆಗೆದುಕೊಂಡು ಹೊರಟು ಹೋದಳು.

ಈ ಬಡಹುಡುಗಿ ಉಳಿದುದನ್ನು ತಾನುಂಡು, ಛತ್ರದ ಕೋಣೆಯನ್ನು ಶುಭ್ರ ಮಾಡಿ ಬಾಗಿಲಿನಲ್ಲಿ ನಿಂತಿದ್ದಳು. ಆವೇಳೆಗೆ ಆ ಶ್ರೀಮಂತೆ ಆ ಬಡಹುಡುಗಿಯ ತಂದೆ, ತಾಯಿ, ಉಡುಗೊರೆಗಳ ಸಮೇತ ಬಂದಳು. ಹುಡುಗಿಯನ್ನು ಮೇನದಲ್ಲಿ ಕೂರಿಸಿ ಕೊಂಡಳು. ತನ್ನ ಊರಿಗೆ ತಲುಪಿದಳು. ಅಲ್ಲಿ ಕಾದಿದ್ದ ಅವಳ ಚಲುವಿನ ಪುತ್ರ.

ಬಡವಿಯಾದರೂ ಬುದ್ಧಿವಂತೆಯಾದ ಈ ಶ್ಯಾನುಭೋಗನ ಮಗಳಿಗೂ ಆ ಶ್ರೀಮಂತಳ ಮಗನಿಗೂ ಮದುವೆ. ಆಸ್ತಿಯೆಲ್ಲ ಬಡಹುಡುಗಿಗೆ. ಜೊತೆಯಲ್ಲಿ ಹುಡುಗಿಗೆ ಚಲುವಾದ ಗಂಡನೂ ಸಿಕ್ಕಿದ ಹಾಗಾಯಿತು.



3

# ಮಳೆರಾಯನ ಗುಟ್ಟು

ಬಿ. ಶ್ರೀ. ಪಾಂಡುರಂಗರಾಯರು

ಸಮುದ್ರರಾಜ ತುಂಟನೆಂದರೆ ತುಂಟ. ಒಂದು ದಿವಸ ಅವನು ಹುಚ್ಚೆದ್ದು ಕುಣಿದ. ರೇಗಿ ಭೂಮಿಯ ಮೇಲೆ ನುಗ್ಗಿದ. ಅವಳ ಮನೆಮಠಗಳನ್ನು ನೀರಿನಲ್ಲಿ ಮುಳುಗಿಸಿದ. ದನಕರುಗಳೆಲ್ಲಾ ನೀರಿನ ಪಾಲಾದವು. ಮನುಷ್ಯರೆಲ್ಲಾ ಅವನ ಪ್ರವಾಹದಲ್ಲಿ ತೇಲಿ ಹೋದರು. ಭೂದೇವಿಯು ಗೋಳೋ ಎಂದು ಅತ್ತಳು. ಅವಳ ಗೋಳು ಆಕಾಶವನ್ನು ಮುಟ್ಟಿತು.

ಆಕಾಶದಲ್ಲಿ ಸೂರ್ಯ ಸಂಚಾರ ಹೊರಟಿದ್ದ. ಭೂದೇವಿಯ ಅಳುವನ್ನು ಅವನು ಕೇಳಿ ಏನೆಂದು ಕೆಳಗೆ ನೋಡಿದ. ಸಮುದ್ರರಾಜನ ಹಾವಳಿ ಅವನಿಗೆ ತಿಳಿಯಿತು. ಸೂರ್ಯ ಅವನ ಮೇಲೆ ಕಿಡಿಕಿಡಿಯಾದ.

ಸೂರ್ಯ ಬೆಂಕಿಯ ಮುದ್ದೆ. ಯಾವಾಗಲೂ ಧಗ ಧಗ ಉರಿಯುತ್ತಿರುತ್ತಾನೆ. ಅವನ ಹತ್ತಿರ ಯಾರಾದರೂ ಹೋದರೆ ಸಾಕು ಅವರು ಸುಟ್ಟು ಬೂದಿಯಾಗುತ್ತಾರೆ. ಅವನು ಮೈಯಿಂದ ಕಿರಣಗಳನ್ನು ಬಿಟ್ಟರೆ ಸಾಕು. ದೂರವಿರುವವರು ಕೂಡಾ ಹಾ! ಹಾ! ಎನ್ನುತ್ತಾರೆ. ಹೀಗಿರುವಾಗ ಅವನು ರೇಗಿದರೆ ದೇವರೆ ಗತಿ. ಸೂರ್ಯ ಸಮುದ್ರರಾಜನ ಮೇಲೆ ರೇಗಿ ಒಂದು ಸಲ ತಿರ್ರನೆ ತಿರುಗಿದ. ಅವನ ತಿರುಗಿಗೆ ಲೋಕಗಳೆಲ್ಲಾ ನಡುಗಿದುವು.

ಸೂರ್ಯನ ಕಿರಣಗಳೇ ಬಿಸಿಲು. ಕಿರಣಗಳ ಕಾವಿನಿಂದ ಸಮುದ್ರರಾಜ ತತ್ತರಿಸಿಹೋದ. ಅವನ ಮೈಯೆಲ್ಲಾ ಕುದಿದುಹೋಯಿತು. ಅವನು ನೋವಿನಿಂದ 'ಹಾ! ಹಾ!' ಎಂದು ಚೀರತೊಡಗಿದ. ಎಲ್ಲೆಲ್ಲಿಯೂ ಅವನ ಚೀರಾಟ ಕೇಳಿಸಿತು. 'ಭರೋ' ಎಂದು ಕೂಗು ಮೊಳಗಿತು.

ಬಿಸಿಲಿನ ತಾಪಕ್ಕೆ ಸಮುದ್ರರಾಜನ ಮೈ ಬೆವರಿತು. ಒಳಗಿನಿಂದ ಬೆವರಿನ ನೀರು ಹಬೆಯಾಗಿ ಹೊರಟಿತು. ಆವಿಯಾಗಿ ಮೇಲೆ ಹೋಗಿ ಆಕಾಶದಲ್ಲಿ ಒಂದು ಕಡೆ

ಸೇರತೊಡಗಿತು. ತುಸು ಹೊತ್ತಿನೊಳಗಾಗಿ ಬೆಟ್ಟಗಳ ಸಾಲಿನಂತೆ ಕಪ್ಪಗೆ ಹೆಪ್ಪುಗಟ್ಟಿತು. ಈ ವಿಚಿತ್ರ ನ್ನೋಡಿ ಭೂದೇವಿ ನಡುಗಿಹೋದಳು.

ಕತ್ತಲು ಎಲ್ಲಿಂದ ಬಂತು? ಕತ್ತಲು ಹೇಗೆ ಕವಿಯಿತು? ಹೀಗೆಂದು ಯೋಚಿಸುತ್ತ ಸಮುದ್ರರಾಜ ಮೇಲೆ ನೋಡಿದ. ಹಾಗೆಯೇ ಯೋಚಿಸಿದ. ಸೂರ್ಯನೇ ಇದಕ್ಕೆ ಕಾರಣವೆಂದು ತಿಳಿದುಕೊಳ್ಳುವುದಕ್ಕೆ ಅವನಿಗೆ ಬಹಳ ಹೊತ್ತು ಬೇಕಾಗಲಿಲ್ಲ. ಕೂಡಲೇ ಅವನಿಗೊಂಡು ಯುಕ್ತಿ ಹೊಳೆಯಿತು. 'ಸೇಡಿಗೆ ಸೇಡು' ಎಂದು ಕಟಕಟ ಹಲ್ಲು ಕಡಿದ. ತನ್ನಿಂದ ಹುಟ್ಟಿದ ಆ ಕಾಡಿಗೆ ಕಪ್ಪನ್ನು 'ಮೋಡಣ್ಣ' ಎಂದು ಕರೆದ. ಮೋಡಣ್ಣನನ್ನು ಕರೆದು 'ಮಗು ನೋಡು; ಸೂರ್ಯ ನನಗೆ ಹಗೆ. ಅದರಿಂದ ನೀನು ಅವನನ್ನು ಕಾಡು. ಅವನು ಹೋದಲ್ಲಿಗೆ ಹೋಗಿ ಅವನ ಮುಖದ ಕಾಂತಿಯನ್ನು ನಿನ್ನ ದೊಡ್ಡ ದೇಹದಿಂದ ಮರೆಮಾಡು! ಎಂದು ಹೇಳಿದ. ಮೋಡಣ್ಣ ತಂದೆಯ ಮಾತು ಕೇಳಿ ಸೂರ್ಯನನ್ನು ತನ್ನ ಮೈಯಿಂದ ಮರೆಮಾಡಿದ. ಭೂದೇವಿಗೆ ಸೂರ್ಯನಿಂದ ಬರುತ್ತಿದ್ದ ಬೆಳಕು ನಿಂತಿತು. ಗಿಡಮರಗಳು ಬಾಡಿ ಮುದುಡಿದುವು. ಮನುಷ್ಯ-ಪ್ರಾಣಿ ಸಾಯುವಂತಾಯಿತು.

ಈಗ ಸೂರ್ಯನಿಗೆ ಕೋಪ ಮಿತಿಮೀರಿತು. 'ಆನೆಯ ಮುಂದೆ ಆಡೇ' ಎಂದುಕೊಂಡು ಗೆಳೆಯ ಗಾಳಿರಾಯನನ್ನು ಸಹಾಯಕ್ಕೆ ಕರೆದ. "ಸಮುದ್ರರಾಜನ ತುಂಟತನ ನೋಡಿದೆಯಾ! ಮೋಡಣ್ಣನ ಕೀಟಲೆ ಕಂಡೆಯಾ! ದುರುಳರಿಬ್ಬರನ್ನೂ ನೋಡಿಕೊ' ಎಂದ. ಗಾಳಿರಾಯ ಇನ್ನು ಸುಮ್ಮನಿರುವನೆ? ಭರೋ ಎಂದು ಒಂದು ಸಲ ಗರ್ಜಿಸಿ ಮೇಲಿನಿಂದ ಧುಮ್ಮನೆ ಸಮುದ್ರರಾಜನ ಮೇಲೆ ಕುಕ್ಕರಿಸಿ ಆಕಾಶಕ್ಕೆ ಪುಟ ನೆಗೆದ. ಮೋಡಣ್ಣನಂತೂ ಏನೋ ಬಂತು ಪ್ರಳಯ ಎಂದು ಭಯದಿಂದ ಅಲ್ಲಾಡಿ ಹೋದ.

ಗಾಳಿರಾಯ ಮೋಡಣ್ಣನನ್ನು ಬೆನ್ನಟ್ಟಿದ. ಮೋಡಣ್ಣ ಸತ್ತೆನಪ್ಪಾ ಎಂದು ಕಾಲಿಗೆ ಬುದ್ಧಿ ಹೇಳಿದ. ಗಾಳಿರಾಯನ ಕೈಯಿಂದ ತಪ್ಪಿಸಿಕೊಳ್ಳೋಣ ಎಂದು ಮೈ ಹಗುರ ಮಾಡಿಕೊಂಡು ಓಡಿದ. ಮೋಡಣ್ಣ ಓಡಿದರೆ ಅಡ್ಡ ಸಿಕ್ಕಿತು ಒಂದು ಪೆಡಂಭೂತ. ನೂರಾನೆ ಗಾತ್ರ ಆಕಾರದ ಬಂಡೆಗಳ ಬೆಟ್ಟ ಆಕಾಶವನ್ನು ಮುಟ್ಟುವಷ್ಟು ಎತ್ತರ ಬೆಳೆದು ಅಡ್ಡ ನಿಂತಿದೆ. ಗಾಳಿರಾಯ ಮೋಡಣ್ಣನನ್ನು ಆ ಬೆಟ್ಟಕ್ಕೆ ಡಿಕ್ಕಿ ಹೊಡೆಸಿದ. ಅಯ್ಯಯ್ಯೋ ಎಂದು ಮೋಡಣ್ಣ ಅಳುತ್ತಾ ದಮ್ಮಯ್ಯಗುಡ್ಡೆ ಹಾಕಿದ. .ಕೇಳುವವರು ಯಾರು? ಅವನ ಅಳುವಿನ ನೀರು ಬೆಟ್ಟದಿಂದ ನದಿಯಾಗಿ ಜಾರಿತು.

ಬಿಡಬೇಕಲ್ಲಾ ಕೆಟ್ಟ ಗಳಿಗೆ ಗಾಳಿರಾಯ, ಬಿಡಲೇ ಇಲ್ಲ. ಮೋಡಣ್ಣನನ್ನು ಹಿಂಬಾಲಿಸಿದ. ಹೆಮ್ಮರಗಳು ಎತ್ತರವಾಗಿ ಬೆಳೆದು ಆಕಾಶವನ್ನು ಮುತ್ತಿಡುತ್ತ ಎದುರಿಗೆ

ನಿಂತಿವೆ. ಮೋಡಣ್ಣ ಕಕ್ಕಾಬಿಕ್ಕಿಯಾದ. ಹಾಳುಮರಗಳು ಎಂದು ಗೊಣಗಿದ, ರೇಗಿದ. ಗಾಳಿರಾಯ ಅಲ್ಲೂ ಬಂದು ಮೋಡಣ್ಣನನ್ನು ಮರಗಳ ಮೇಲೆ ನೂಕಿಬಿಟ್ಟ. ಈಗಂತೂ ಮೋಡಣ್ಣನ ಮೈ ತಾತಾತೂತಾಯಿತು. ಎಲ್ಲೆಲ್ಲಿಂದಲೂ ನೀರು ಹೊರಟುಕೊಂಡಿತು. ಆಕಾಶದಿಂದ ಮಳೆಯಾಗಿ ಸುರಿಯಿತು. ನೆಲದ ಮೇಲೆ ಹೊಳೆಯಾಗಿ ಹರಿಯಿತು. ನದಿಯಾಗಿ ಹರಿದು ಸಮುದ್ರ ಸೇರಿ ಮಹಾ ಸಾಗರವಾಯಿತು.

ಅಂದಿನಿಂದ ಮೋಡಣ್ಣ ಗಾಳಿರಾಯನಿಗೆ ಹೆದರುತ್ತಾನೆ. ಸಮುದ್ರರಾಜ ಸೂರ್ಯನಿಗೆ ಭಯಪಡುತ್ತಾನೆ. ಇವರಿಬ್ಬರ ಜಗಳದಲ್ಲಿ ಮಳೆರಾಯ ಹುಟ್ಟಿದ. ಜೊತೆಗೆ ಈ ಹಾಡೂ ಹುಟ್ಟಿಕೊಂಡಿತು.

ಹುಯ್ಯೋ! ಹುಯ್ಯೋ ಮಳೆರಾಯ;
ಹೂವಿನ ತೋಟಕ್ಕೆ ನೀರಿಲ್ಲ.
ಬಾರೋ! ಬಾರೋ! ಮಳೆರಾಯ;
ಬಾಳೆಯ ತೋಟಕ್ಕೆ ನೀರಿಲ್ಲ.

4

# ಪಂಚಾಮೃತ

**ದೇವುಡು, ರಾಮು**

ಮಂಗಮ್ಮನು ಬಲು ಚತುರೆ. ಜಾಣೆ ಎಂದರೆ ಜಾಣೆ. ಅವಳು ಹಾಗೆ ಹೋಗಿ ಹೀಗೆ ಬಂದರೆ ಅವಳ ಮಡಿಲು ತುಂಬಾ ಸೊಪ್ಪು, ಮುಡಿ ತುಂಬಾ ಹೂ. ಚೆಂಗಮ್ಮನು ಅವಳ ಮಗಳು. ಕೇಳಬೇಕೇ? ತಾಯಿಗಿಂತ ಜಾಣೆ ಮಗಳು.

ಒಂದು ದಿನ ಅವರ ಊರಿನಲ್ಲಿ ತೇರು. ಅವರ ಊರೂ ಮೈಸೂರು ಬೆಂಗಳೂರುಗಳ ಹಾಗೆ ದೊಡ್ಡ ಊರು ಏನೂ ಅಲ್ಲ. ಆದರೂ ಸುತ್ತ ಹತ್ತು ಮನೆಯಿದ್ದ ಆ ಊರು ತೇರಿನ ದಿನ ಮಾತ್ರ ದೊಡ್ಡ ಸಂತೆಗಳಿಗಿಂತ ಹೆಚ್ಚಾಗಿ ಇರುವುದು.

ತೇರಿಗೆ ಕಾಡು ಹೂ ತಂದು ಸಿಕ್ಕಿಸಿದರೆ ಚೆನ್ನ ಎಂದು ಮಂಗಮ್ಮ ಮಾತನಾಡಿ ಕೊಳ್ಳುತ್ತಿದ್ದಳು. ಚೆಂಗಮ್ಮ ಕೇಳಿದಳು: "ಇದೇನು ಮಹಾ! ಅಮ್ಮ ಹೋಗುವುದಕ್ಕೆ ಆಗದಿದ್ದರೆ ನಾನೇ ಹೋಗುತ್ತೇನೆ" ಎಂದುಕೊಂಡು ಹೊರಟಳು.

ಕಾಡಿನಲ್ಲಿ ಬೆಳೆಯುವ ಹೂಗಳನ್ನೆಲ್ಲ ಕಿತ್ತುಕೊಂಡಳು. ಗೋರಂಟಿ, ಹಾಲೆ, ಮಲ್ಲಿಗೆ, ಪಾದರಿ ಎಲ್ಲ ಹೂಗಳನ್ನೂ ಕೊಯ್ದುಕೊಂಡು ಬರುತ್ತಿರುವಾಗ ಒಂದು ತಮಾಷೆ ನಡೆಯಿತು.

ಒಂದು ಹಲಸಿನ ಮರ. ತುಂಬಾ ಹಣ್ಣು ಬಿಟ್ಟು ಜಗ್ಗುತ್ತಾ ಇದೆ. ಅದರ ಮೇಲಕ್ಕೆ ಒಂದು ಕರಡಿ ಹತ್ತಿದೆ. ಮೇಲಿನಿಂದ ಒಂದು ಹಣ್ಣು ಎತ್ತಿ ಹಾಕಿತು. ಕೆಳಕ್ಕೆ ಧೊಪ್ಪನೆ ಬಿತ್ತು. ಆ ಬಿದ್ದುದು ಚೆಂಗಮ್ಮನ ಮುಂದೆ ಎರಡು ಹೆಜ್ಜೆ ದೂರದಲ್ಲಿಯೇ ಬಿದ್ದಿರಬೇಕೆ? ಮೇಲಿಂದ ಒಂದು ಭಾರಿ ಹಲಸಿನ ಹಣ್ಣು ಕೆಳಕ್ಕೆ ಬಿದ್ದರೆ, ಆ ಸದ್ದಿಗೇ ಚೆಂಗಮ್ಮನ ಎದೆ ಝಲ್ಲೆಂದಿತು. ಇದೇನಪ್ಪಾ! ಎಂದು ನೋಡುತ್ತಿರುವಾಗಲೇ ಕರೀ ಕಂಬಳಿ ಮೂಟೆ ಉರುಳಿದ ಹಾಗೆ ಕರೀ ಕರಡಿ ಮರದಿಂದ ಧುಮುಕಿತು.

ಚೆಂಗಮ್ಮನಿಗೆ ಏನೂ ತೋರಲಿಲ್ಲ. ಗಾಬರಿಯಾದರೂ ಓಡಿ ಹೋಗುವುದಕ್ಕೂ ತೋರಲಿಲ್ಲ. ಇನ್ನೊಂದು ಗಳಿಗೆಯೊಳಗಾಗಿ ಕರಡಿ ಕೂಗಿಕೊಂಡಿತು. ಅದು ಬಿದ್ದಾಗ

ಒಂದು ಭಾರಿ ದಸಿ, ಎಂದರೆ ಗೂಟದಂತಹ ಒಂದು ಮರ, ಅದರ ಬೆನ್ನಿಗೆ ನಾಟಿಬಿಟ್ಟಿತು. ಅದಕ್ಕೆ ಪ್ರಾಣ ಹೋಗುವ ಹಾಗೆ ಆಯಿತು. ಅದಕ್ಕೆ ಅದು ಹೋ ಎಂದು ಕಿರಚಿಕೊಂಡಿತು. ಆ ನೋವು ತಡೆಯ ಲಾರದೇ ಕರಡಿ ಕಿರುಗುಟ್ಟಿಹೋಯಿತು. ಸರಿಯಾಗಿ ಒಂದು ಬೆರಳು ದಪ್ಪ ಇದೆ. ಒಂದು ಗೇಣು ಇದೆ. ಅದು ಸುಮಾರು ನಾಲ್ಕು ಬೆಟ್ಟಿನಷ್ಟು ಒಳಕ್ಕೆ ಇಳಿದಿದೆ. ಕರಡಿ ಕೂಗಿಕೊಳ್ಳದೆ ಏನು ತಾನೇ ಮಾಡಬೇಕು?

ಇಷ್ಟಾದರೂ ಚೆಂಗಮ್ಮ ಅಲ್ಲೇ ನಿಂತುಬಿಟ್ಟಿದ್ದಾಳೆ. ಅವಳಿಗೆ ದಿಗಿಲಾಗಿ ಕಾಲಿಗೆ ಮೊಳೆ ಪೆಟ್ಟಿದ ಹಾಗಾಗಿ ಹೋಗಿದೆ. ಕೂಗಿಕೊಳ್ಳುವುದಕ್ಕೂ ಬಾಯಿ ಬರದು. ಓಡಿ ಹೋಗುವುದಕ್ಕೂ ಕಾಲು ಬರದು. ಹೀಗಿರುವಾಗ ಕರಡಿಯೇ ಇತ್ತ ಕಡೆ ತಿರುಗಿತು. "ಸದ್ಯಕ್ಕೆ ನೀನೊಬ್ಬಳಾದರೂ ಇದ್ದಿಯಲ್ಲ, ನೀನು ಈ ದಹಿ ಕಿತ್ತುಹಾಕಿದರೆ ನಿನಗೆ ಬೇಕಾದುದು ಕೊಡುತ್ತೇನೆ. ನೀವು ಮನುಷ್ಯರು. ಏನಾದರೂ ಮಾಡು" ಎಂದು ಕರಡಿಯು ಕೇಳಿಕೊಂಡಿತು.



ಚೆಂಗಮ್ಮ ಬಲು ಒಳ್ಳೆಯವಳು. ಕರಡಿ ಕಂಡು ದಿಗಿಲಾದರೂ ಅದು ಕೇಳಿಕೊಂಡದ್ದು ನೋಡಿ ಅಯ್ಯೋ ಪಾಪ! ಎನ್ನಿಸಿತು. ಸಣ್ಣ ಹುಡುಗಿಯಾದರೂ ಧೈರ್ಯ ಮಾಡಿ, ಹತ್ತಿರ ಹೋದಳು. ದಸಿಯನ್ನು ನೋಡಿದರೆ ಚೆನ್ನಾಗಿ ನಾಟಿಕೊಂಡಿದೆ. ಇವಳು ಅದನ್ನು ಕೀಳುವುದು ಹೇಗೆ?

ಕೊನೆಗೆ ಅವಳು ಒಂದು ಉಪಾಯ ಮಾಡಿದಳು. ಕಾಡಿನ ಹಂಬುಗಳನ್ನು ಕಿತ್ತು ಅದಕ್ಕೆ ಕಟ್ಟಿದಳು. ಆ ಹಂಬು ತಂದು ಹೊಸೆದು ಸಣ್ಣ ಗಿಡಕ್ಕೆ ಭದ್ರವಾಗಿ ಕಟ್ಟಿದಳು. "ಕರಡಿ! ಕರಡಿ! ನೀನು ಝಾಡಿಸಿ ಎಳೆ ಈಗ" ಎಂದಳು. ಕರಡಿಯು ಹಾಗೇ ಮಾಡಿತು. ಗೂಟವು ಕಿತ್ತು ಈಚೆಗೆ ಬಂತು.

ಕರಡಿಯ ನೋವು ಮಾಯವಾಯಿತು. ಗಾಯಕ್ಕೆ ಚೆಂಗಮ್ಮನೇ ಎರಟು ಸೊಪ್ಪು ತಂದು ಅರದು ತುಂಬಿದಳು. ಕರಡಿಯು ಇನ್ನೇನು ಬಿಡು ತಂಗಿ! ಈ ಗಾಯ ಏನು ಮಹಾ! ನೆಕ್ಕುತಾ ನೆಕ್ಕುತಾ ಇದ್ದರೆ ವಾಸಿಯಾಗಿ ಹೋಗುತ್ತೆ" ಎಂದಿತು.

ಚೆಂಗಮ್ಮನು "ನಮ್ಮೂರಿನಲ್ಲಿ ತೇರು. ನಾನು ಹೋಗಬೇಕು" ಎಂದಳು. ಕರಡಿಯು "ಹಾಗಾದರೆ ಕೊಂಚ ಇರು. ಇನ್ನೆರಡು ಹಲಸಿನ ಹಣ್ಣು ತಂದು ಕೊಡುತ್ತೇನೆ. ತೆಗೆದುಕೊಂಡು ಹೋಗು" ಎಂದಿತು. ಚೆಂಗಮ್ಮನು "ಹಲಸಿನ ಹಣ್ಣುಗಿಣ್ಣು ಬೇಡಾಪ್ಪ! ಕೊಡುವುದಾದರೆ ನಿಮ್ಮ ಪಂಚಾಮೃತ ಕೊಡು" ಎಂದಳು.

ಪಂಚಾಮೃತ ಎನ್ನುತ್ತಲೂ ಕರಡಿಗೆ ನೆನಪು ಬಂತು. ಒಂದು ನದಿಯ ನಡುವೆ ಇದ್ದ ಬಂಡೆಯ ಮೇಲೆ ಯಾವೊತ್ತೊ ಕಲಸಿ ಇಟ್ಟಿದ್ದು ಇದಕ್ಕೆ ಮರೆತೇಹೋಗಿತ್ತು. ಕೂಡಲೇ ಚೆಂಗಮ್ಮನನ್ನು ಬೆನ್ನಮೇಲೆ ಕುಳ್ಳಿರಿಸಿಕೊಂಡು ಅಲ್ಲಿಗೆ ಓಡಿತು. ಅಲ್ಲಿ ಇದ್ದ ಪಂಚಾಮೃತ ಚೆನ್ನಾಗಿ ಕಳಿತು ಒಳ್ಳೇ ರಸಾಯನ ಆದ ಹಾಗೆ ಆಗಿತ್ತು. ಚೆಂಗಮ್ಮನ ಹತ್ತಿರ ಇದ್ದ ಗೂಡೆಯಲ್ಲಿ ಒಂದು ಅಡಕೆ ಪಟ್ಟೆ ಹಾಕಿ, ಅದರ ತುಂಬ ಪಂಚಾಮೃತ ತುಂಬಿಕೊಂಡು, ಅದನ್ನು ತಾನೇ ಹೊತ್ತುಕೊಂಡು ಚೆಂಗಮ್ಮನನ್ನು ಎತ್ತಿಕೊಂಡು, ಕರೆದುಕೊಂಡು ಊರು ಬಾಗಿಲಿಗೆ ಬಂದು ಬಿಟ್ಟುಹೋಯಿತು.

"ಚೆಂಗಮ್ಮಾ, ಯಾವೊತ್ತಾದರೂ ಕಾಡಿಗೆ ಬಂದರೆ ನಮ್ಮ ಮನೆಗೆ ಬಾ! ಅಲ್ಲಿ ನನ್ನ ಮಕ್ಕಳು ಇದ್ದಾರೆ. ಅವರನ್ನೆಲ್ಲಾ ತೋರಿಸುತ್ತೇನೆ. ಇನ್ನು ಯಾವುದಾದರೂ ಕರಡಿ ಸಿಕ್ಕಿದರೆ, ಕರೀಜುಂಗಕ್ಕನ ಮನೆ ಯಾವುದು ಎಂದು ಕೇಳು. ಅದು ನಿನಗೆ ತಲೆ ಕೂದಲು ಚುಳ್ ಎನ್ನದ ಹಾಗೆ ನಮ್ಮ ಮನೆಗೆ ಕರೆದುಕೊಂಡು ಬರುತ್ತದೆ" ಎಂದು ಹೇಳಿ ಹೋಯಿತು.

ಚೆಂಗಮ್ಮನು ಅಷ್ಟು ಬಾರಿ ಗವಾಡೆಯ ತುಂಬಾ ಇರುವ ಪಂಚಾಮೃತ ಹೊತ್ತು

ಕೊಂಡು ಹೋಗುವುದಕ್ಕೆ ಸಾಧ್ಯವೇ? ಅತ್ತಕಡೆ ಹೋಗುತ್ತಾ ಇದ್ದವರು ಯಾರನ್ನೋ ಕೇಳಿಕೊಂಡು, ಅದನ್ನು ಮನೆಗೆ ತೆಗೆಸಿಕೊಂಡು ಹೋದಳು.

ತಾಯಿಯು ಮಗಳು ಇಷ್ಟು ಹೊತ್ತಾದರೂ ಬರಲಿಲ್ಲವಲ್ಲ ಎಂದು ಒದ್ದಾಡುತ್ತಿದ್ದಳು. ಮಗಳು ಬಂದುದು ನೋಡಿ ಅವಳಿಗೆ ಹೋಗಿದ್ದ ಪ್ರಾಣ ಮರಳಿ ಬಂದಂತೆ ಆಯಿತು. ಮಗಳನ್ನು ಬೇಕಾದ ಹಾಗೆ ಮುದ್ದಾಡಿ, ಅವಳ ಕಥೆಯನ್ನೆಲ್ಲ ಕೇಳಿ “ಅಯ್ಯೋ! ನನ್ನ ಕಂದ; ಏನೇನು ಮಾಡಿಕೊಂಡು ಬಂದೆಯಮ್ಮ” ಎಂದು ತಬ್ಬಿಕೊಂಡಳು.

ಪಂಚಾಮೃತ ದೇವರಿಗೆ ನೈವೇದ್ಯ ಆಯಿತು. ಎಲ್ಲರಿಗೂ ಅವತ್ತು ಅದೇ ಪ್ರಸಾದ.



# 5

## ಆಡಿನ ಆಟ

**ಬಿ. ಶಂಕರಭಟ್ಟ, ಬಿ.ಎಂ. ಶರ್ಮಾ**

ಒಂಟೆಯನ್ನು ನೀವು ನೋಡಿದ್ದೀರಾ? ಒಂಟೆ ತುಂಬಾ ಎತ್ತರವಾಗಿರುವ ಪ್ರಾಣಿ. ಅದರ ಕತ್ತು ಬಲು ಉದ್ದ; ಕಾಲುಗಳು ಉದ್ದ; ಬೆನ್ನ ಮೇಲೊಂದು ಡುಬ್ಬ. ಒಂಟೆ ಒಮ್ಮೆ ನೀರು ಕುಡಿದರೆ ಮತ್ತೆ ಹತ್ತು ಹದಿನೈದು ದಿನಗಳ ವರೆಗೂ ನೀರಿಲ್ಲದೆ ಇರಬಲ್ಲುದು.

ಒಮ್ಮೆ ಒಂದು ಒಂಟೆ ಒಂದು ಮರದ ಕೆಳಗೆ ಮಲಗಿಕೊಂಡಿತ್ತು. ಆಗ ಅಲ್ಲಿಗೊಂದು ಆಡು ಆಡುತ್ತಾ ಬಂತು. ಮರದ ಕೊಂಬೆರೆಂಬೆಗಳಲ್ಲಿ ಚಿಗುರು ಎಲೆಗಳಿದ್ದುವು. ಆಡಿಗೆ ಆ ಚಿಗುರೆಲೆಗಳನ್ನು ತಿನ್ನಬೇಕೆಂದು ಆಸೆಯಾಯಿತು. ಅದನ್ನು ಕಂಡು ಬಾಯಲ್ಲಿ ನೀರು ಊರಿತು. ಆದರೆ ಏನು ಮಾಡುವುದು? ಚಿಗುರೆಲೆ ಆಡಿಗೆ ಎಟಕುತ್ತಿರಲಿಲ್ಲ. ಅದು ತುಸು ಹೊತ್ತು ಸುಮ್ಮನೆ ನಿಂತು ಚಿಗುರೆಲೆ ತಿನ್ನುವುದು ಹೇಗೆಂದು ಯೋಚಿಸಿತು.

ಆಡಿಗೆ ಒಂದು ಉಪಾಯ ಹೊಳೆಯಿತು. ಅದು ಒಂಟೆಯ ಬಳಿ ಬಂತು. "ಒಂಟೆಪ್ಪಾ, ಒಂಟೆಪ್ಪಾ, ನೀನು ತುಂಬಾ ಎತ್ತರ ಎಂದು ಹೇಳುತ್ತಾರೆ. ಆದರೆ ನೋಡುವಾಗ ನೀನು ಅಷ್ಟೊಂದು ಎತ್ತರವಿಲ್ಲ. ಈ ಮರದ ಕೊಂಬೆ ಕೂಡ ನಿನಗೆ ಎಟಕುವುದಿಲ್ಲ. ಎಲ್ಲರೂ ನಿನ್ನನ್ನು ಎತ್ತರ ಎಂದು ಹೇಳುವುದು ಸುಳ್ಳೆ?" ಎಂದಿತು.

ಆಡಿನ ಮಾತು ಕೇಳಿ ಒಂಟೆಗೆ ಕೋಪ ಬಂತು. "ತುಂಟ ಆಡೇ ನನ್ನನ್ನು ಹೀಯಾಳಿಸುವೆಯಾ? ನೋಡಿಲ್ಲಿ; ನಾನು ಎಷ್ಟು ಎತ್ತರವಾಗಿದ್ದೇನೆಂದು ನೋಡು" ಎಂದು ಹೇಳಿತ್ತಾ ಒಂಟೆ ಎದ್ದು ನಿಂತಿತು. ಕೋಪದಿಂದ ಒಂದೆರಡು ಕೊಂಬೆಗಳನ್ನು ಮುರಿದು ಹಾಕಿತು.

ಆಡಿಗೂ ಬೇಕಾದುದು ಅಷ್ಟೆ. "ಒಂಟೆಪ್ಪಾ, ನೀನು ನಿಜವಾಗಿಯೂ ತುಂಬಾ ಎತ್ತರ, ತುಂಬಾ ಎತ್ತರ" ಎಂದು ಹೇಳುತ್ತಾ ಆ ಉಪಾಯಗಾರ ಆಡು ಆ ಕೊಂಬೆಗಳಲ್ಲಿದ್ದ ಚಿಗುರೆಲೆಗಳನ್ನು ತಿಂದು 'ಮೇ, ಮೇ' ಎನ್ನುತ್ತಾ ಹೊರಟು ಹೋಯಿತು.

## 6

# ಪೂರ್ಣಿಮಾ ಚಂದ್ರಲೋಕಕ್ಕೆ ಹೋದದ್ದು...

ಸಂಜಯ ಹಾವನೂರು

ಮೊದಲೇ ಹೇಳಿಬಿಡುತ್ತೇನೆ. ಇದು ಕನಸಿನಲ್ಲಿ ಆದ ಘಟನೆ ಅಲ್ಲ ಅಂತ. ಪೂರ್ಣಿಮಾ ನಿಜಕ್ಕೂ ಚಂದ್ರಲೋಕಕ್ಕೆ ಹೋಗಿ ಬಂದಿದ್ದಾಳೆ. ಅವಳ ಹತ್ತಿರ ಅದಕ್ಕೆ ಪುರಾವೆಯೂ ಇದೆ. ಸ್ಪೇಸ್ ಸೂಟನ್ನು ಹಾಕಿಕೊಂಡು ರಾಕೆಟ್ಟಿನಲ್ಲಿ ಕೂಡುವ ಮೊದಲು ಅವಳಿಗೂ ಈ ಸಂಶಯ ಬಂದಿತ್ತು. ಆದರೆ ಅವಳು ತನ್ನನ್ನು ಚಿವುಟಿಕೊಂಡು ಇದು ಕನಸಲ್ಲ ಎಂದು ಖಾತ್ರಿ ಮಾಡಿಕೊಂಡಿದ್ದಾಳೆ.

ನಾವೆಲ್ಲ ಕನಸಿನಲ್ಲಿಯೂ ಅಲ್ಲಿಗೆ ಹೋಗಿಲ್ಲವಲ್ಲ. ಇವಳು ನಿಜವಾಗಿಯೂ ಹೇಗೆ ಹೋದಳು ಎಂದು ನೀವೆಲ್ಲ ಕಣ್ಣುಕಣ್ಣು ಬಿಡಬಹುದು. ಅದು ಹೇಗಾಯಿತೆಂದು ಚುಟುಕಾಗಿ ಹೇಳಿಬಿಡುತ್ತೇನೆ. ಇಪ್ಪತ್ತನೆಯ ಶತಮಾನದಲ್ಲಿ ಯಾವಾಗಲೋ ಒಮ್ಮೆ ಅಂತರರಾಷ್ಟ್ರೀಯ ಮಕ್ಕಳ ವರ್ಷ ಎಂದು ಆಚರಿಸಿದರು. ಅನಂತರ ಕ್ರಮವಾಗಿ ಮಕ್ಕಳ ವರ್ಷವನ್ನು ಆಚರಿಸುವ ಒಂದು ಸಂಪ್ರದಾಯ ಬೆಳೆದುಕೊಂಡಿತು. ಮೊದಲ ವರ್ಷದಲ್ಲಿ ತಮ್ಮ ಬಗ್ಗೆ ಭಾಷಣಗಳನ್ನು ಕೇಳಿ ಆಗಿನ ಮಕ್ಕಳಿಗೆ ತಲೆ ಸಿಡಿದುಹೋಗಿತ್ತು. ಮುಂದಿನ ಬಾರಿಗೆ ಅವರೇ ಬೆಳೆದು ದೊಡ್ಡವರಾಗಿದ್ದರಲ್ಲವೆ? ಆ ವರ್ಷದಲ್ಲಿ ಅವರೆಲ್ಲ ಸೇರಿ ಕೇವಲ ಮಕ್ಕಳಿಗೊಂದು ಲಾಟರಿಯನ್ನು ಏರ್ಪಡಿಸಿದರು — ಮೊದಲ ಬಹುಮಾನ ಚಂದ್ರಲೋಕಕ್ಕೊಂದು ರಿಟರ್ನ್ ಟಿಕೇಟು. ಮುಂದಿನ ವಿಷಯ ನಿಮಗೆ ಈಗಾಗಲೇ ಅರ್ಥವಾಗಿರಬಹುದು. ಬಹುಮಾನ ಸಿಕ್ಕಿದ್ದು ನಮ್ಮೂರಿನ ಹುಡುಗಿ ಪೂರ್ಣಿಮಾಳಿಗೆ. ಅವಳ ಸಂಭ್ರಮವನ್ನು ಕೇಳುವುದೇ ಬೇಡ. ಚಂದ್ರನನ್ನೇ ಲಾಟರಿಯಲ್ಲಿ ಗೆದ್ದವಳಂತೆ ಕುಣಿದಾಡಿಬಿಟ್ಟಳು.

ರಾಕೆಟ್ ಯಾತ್ರೆಗಾಗಿ ಸಿದ್ಧತೆಗಳನ್ನು ಮಾಡಿಕೊಳ್ಳುವ ಭರದಲ್ಲಿ ದಿನಗಳು ಉರುಳಿದ್ದೇ ತಿಳಿಯಲಿಲ್ಲ. ಅಂತೂ ಹೊರಡುವ ದಿನವೂ ಬಂತು. ಹಿರಿಯ ವಿಜ್ಞಾನಿಯೊಬ್ಬರು ಅವಳಿಗೆ ಚಂದ್ರಲೋಕವನ್ನು ತೋರಿಸಲು ಬರುವವರಿದ್ದರು (ಒಬ್ಬಳೇ ಹುಡುಗಿಯನ್ನು

ಅಷ್ಟು ದೂರ ಕಳಿಸಲು ತಂದೆ, ತಾಯಿಗಳು ಒಪ್ಪಬೇಕಲ್ಲ). ಬೆಂಕಿ ಕಾರುತ್ತ ರಾಕೆಟ್ಟು ಪೃಥ್ವಿಯನ್ನು ಬಿಟ್ಟು ಹಾರಿತು. ಬಹಳ ವೇಗವಾಗಿ ಪ್ರಯಾಣ ಮಾಡಿ ಕೆಲವೇ ಗಂಟೆಗಳಲ್ಲಿ ಚಂದ್ರಲೋಕದ ಸಮೀಪಕ್ಕೆ ಹೋಯಿತು.

ದೂರದಿಂದ ಬೆಳ್ಳಗೆ ಕಾಣುತ್ತಿದ್ದ ಚಂದ್ರನನ್ನು ಹತ್ತಿರದಿಂದ ನೋಡಿ ಪೂರ್ಣಿಮಾಳಿಗೆ ನಿರಾಸೆಯೇ ಆಯಿತು. ಚಂದ್ರನ ಮುಖದ ತುಂಬೆಲ್ಲ ಸಿಡುಬಿನ ಕಲೆಗಳು ಅಥವಾ ಮೊಡವೆಗಳು. ಇನ್ನೂ ಹತ್ತಿರ ಹೋದಾಗ ತಿಳಿಯಿತು. ಸಿಡುಬಿನ ಕಲೆಗಳು ಬೇರೆ ಬೇರೆ ಆಕಾರದ ಗುಂಡಿಗಳು ಅಂತ. ಮೊಡವೆಗಳು ಗುಡ್ಡಗಳಾಗಿದ್ದವು. ನೋಡ ನೋಡುತ್ತಿದ್ದಂತೆ ಅವರ ಪುಟ್ಟದಾದ ನೌಕೆ ಚಂದ್ರನ ಮೇಲೆ ಇಳಿಯಿತು.

ಚಂದ್ರನ ಮೇಲೆ ಇಳಿದ ಮೊದಲ ವ್ಯಕ್ತಿ ತಾನೇ ಎಂಬ ಠೀವಿಯಿಂದ ಪೂರ್ಣಿಮಾ ನೌಕೆಯಿಂದ ಇಳಿದು ಚಂದ್ರಲೋಕದ ಮೇಲೆ ಪಾದವೂರಿದಳು. ತಮ್ಮೂರಿನಂತೆ ಇಲ್ಲಿಯೂ ಹಗಲಿನ ಬೆಳಕೇ ಇತ್ತು. ಆದರೆ ಉಳಿದದ್ದೆಲ್ಲವೂ ಬೇರೆಯಾಗಿ ವಿಚಿತ್ರವಾಗಿತ್ತು. ತಾನು ಹಾಕಿಕೊಂಡಿರುವ ಸೂಟು ಒಮ್ಮೆಲೆ ಹಗುರವಾದಂತೆ ಅವಳಿಗೆ ಭಾಸವಾಯಿತು. ಭೂಮಿಯ ಮೇಲೆ ಅದನ್ನು ಹಾಕಿಕೊಂಡು ಓಡಾಡಲು ಆಗುತ್ತಿರಲಿಲ್ಲ. ಅದನ್ನು ತೆಗೆದುಬಿಟ್ಟರೆ ಹೇಗೆ? ಊರಲ್ಲಿ ಹೊಲಿಸಿಕೊಂಡ ಹೊಸಾ ಲಂಗವನ್ನು ಹಾಕಿಕೊಂಡು ಚಂದ್ರನ ಮೇಲೆ ಫೋಟೋ ತೆಗೆಸಿಕೊಳ್ಳಬೇಡವೆ?

"ಖಂಡಿತ ಕೂಡದು" ವಿಜ್ಞಾನಿ ಎಚ್ಚರಿಸಿದರು. "ಇಲ್ಲಿ ಹವೆಯೇ ಇಲ್ಲ"

"ಇಲ್ಲದಿದ್ದರೆ ಬೇಡ. ಕೊಳವೆಯ ಮೂಲಕ ಉಸಿರಾಡಬಹುದು. ಆದರೆ ಚಂದ್ರನ ಮೇಲೆ ಓಡಾಡುವಾಗಲೂ ಈ ದಪ್ಪನೆಯ ಬಿಳಿ ಕವಚ ಏಕೆ?"

"ಹವೆಯನ್ನು ಬರೀ ಉಸಿರಾಡಿದರೆ ಆಯಿತೇ? ಆದರಿಂದ ಬೇರೆ ಪ್ರಯೋಜನಗಳೂ ಇವೆ. ಇಲ್ಲಿ ಸುತ್ತಲೂ ಗುಂಡಿಗಳು ಕಾಣುತ್ತಿವೆಯಲ್ಲ. ಇವು ಹೇಗಾದವು ಎಂದು ಗೊತ್ತೆ ?"

ಪೂರ್ಣಿಮಾ ಹೋಂವರ್ಕ್ ಮಾಡಿಕೊಂಡೇ ಚಂದ್ರನ ಮೇಲೆ ಬಂದಿದ್ದಳು. "ಆಕಾಶದಲ್ಲಿ ಉಲ್ಕೆಗಳೆಂಬ ದೊಡ್ಡ ಆಕಾರದ, ಕಲ್ಲಿನಂತಹ ವಸ್ತುಗಳಿರುತ್ತವೆ. ಅವುಗಳ ಸಂಖ್ಯೆ ಲಕ್ಷಗಟ್ಟಲೇ ಇದ್ದು ಅದೂ ಸೂರ್ಯನನ್ನು ಸುತ್ತುಹಾಕುತ್ತವೆ. ನಡು-ನಡುವೆ ಸಾವಿರಾರು ಉಲ್ಕೆಗಳು ದಾರಿ ತಪ್ಪಿದಾಗ ಚಂದ್ರನಿಗೆ ಬಂದು ಅಪ್ಪಳಿಸಿವೆ. ಆವಾಗಲೇ ಈ ತಗ್ಗುಗಳು ನಿರ್ಮಾಣವಾಗಿವೆ."

"ಕರೆಕ್ಟ್" ವಿಜ್ಞಾನಿ ಹೇಳಿದರು. "ಉಲ್ಕೆಗಳು ಚಂದ್ರನ ಮೇಲೆ ಮಾತ್ರವೇ ಏಕೆ ಬೀಳುತ್ತವೆ? ನಮ್ಮ ಭೂಮಿ ಅವನಿಗಿಂತ ದೊಡ್ಡದಾಗಿದೆ. ಅಲ್ಲೇಕೆ ಅವು ಬೀಳುವುದಿಲ್ಲ?"

ಪೂರ್ಣಿಮಾ ತಲೆಕೆರೆದುಕೊಂಡಳು. ಹೌದು ದಿನಕ್ಕೊಂದಾದರೂ ಉಲ್ಕೆ ಭೂಮಿಯ ಮೇಲೆ ಬೀಳುತ್ತಿರಬೇಕು. ಆದರೆ ಅಂಥಾ ಭಾರೀ ಉಲ್ಕೆ ಊರುಗಳ ಮೇಲೆ ಬಿದ್ದರೇನು ಗತಿ? ಸಾವಿರಾರು ಜನ ಸಾಯುವುದಿಲ್ಲವೆ? ಅವಳು ಮೂಕಳಾಗಿ ನಿಂತದ್ದನ್ನು ನೋಡಿ ವಿಜ್ಞಾನಿಯೇ ಹೇಳಿದರು. "ಗಾಬರಿಯಾಗಬೇಡ. ಉಲ್ಕೆಗಳು ಪೃಥ್ವಿಯ ಮೇಲೆ ಬೀಳುವುದಿಲ್ಲ. ಹವೆಯೇ ಅವುಗಳನ್ನು ತಡೆಗಟ್ಟುತ್ತದೆ. ಉಲ್ಕೆಗಳ ವೇಗ ತುಂಬಾ ಇರುತ್ತದೆ. ಅವು ಹವೆಯಲ್ಲಿ ಹಾಯ್ದು ಬರುವಾಗ ಆದರಲ್ಲಿನ ಅಣುಗಳ ಜೊತೆ ಬಲವಾಗಿ ತಿಕ್ಕಾಟ ನಡೆಯುತ್ತದೆ. ಈ ತಿಕ್ಕಾಟದಲ್ಲಿ ಉಲ್ಕೆಗಳ ಶಾಖ ಎಷ್ಟು ಹೆಚ್ಚಾಗುತ್ತದೆ ಎಂದರೆ ನೆಲ ಮುಟ್ಟುವ ಮೊದಲೇ ಅವು ಉರಿದು ಹೋಗುತ್ತವೆ."



ಈಗ ಪೂರ್ಣಿಮಾಳಿಗೆ ನಿಶ್ಚಿಂತೆಯಾಯಿತು. ಕಣ್ಣಿಗೆ ಕಾಣದಿದ್ದರೂ ಹವೆ ಎಷ್ಟೆಲ್ಲ ನಮಗಾಗಿ ಮಾಡುತ್ತದೆ! ಅಷ್ಟರಲ್ಲಿ ವಿಜ್ಞಾನಿ ಅವಳ ಲಕ್ಷ್ಯವನ್ನು ಸೆಳೆದು ಸೂರ್ಯನನ್ನು ತೋರಿಸಿದರು. "ಸೂರ್ಯನಲ್ಲಿ ನಿನಗೆ ವಿಶೇಷವಾದದ್ದು ಏನಾದರೂ ಕಾಣಿಸುತ್ತದೆಯೇ?"

ಪೂರ್ಣಿಮಾಳಿಗೆ ಹಲವಾರು ವ್ಯತ್ಯಾಸಗಳು ಆಗಲೇ ಗೋಚರವಾಗಿದ್ದವು. ಕ್ಷಿತಿಜದ ಅತ್ಯಂತ ಅಂಚಿನಲ್ಲಿ ಇನ್ನೇನು ಸೂರ್ಯ ಮುಳುಗುವವನೇ ಇದ್ದ. ವಿಚಿತ್ರವೆಂದರೆ ಭೂಮಿಯ ಮೇಲೆ ಅವನು ಹುಟ್ಟುವಾಗ ದೊಡ್ಡದಾಗಿ ಕೆಂಪಗಿರುತಿದ್ದ. ಮುಳುಗುವಾಗಲೂ ಅಷ್ಟೇ. ಇಲ್ಲಿ ಹಾಗಿರಲಿಲ್ಲ. ಸಾಯಂಕಾಲದ ಸೂರ್ಯನೂ ಮಧ್ಯಾಹ್ನದ ಸೂರ್ಯನಂತೆ ಚಿಕ್ಕವನಾಗಿ ನಿಗಿನಿಗಿಯಾಗಿದ್ದ.

"ಇದಕ್ಕೂ ಹವೆ ಇಲ್ಲದಿರುವುದೇ ಕಾರಣ" ವಿಜ್ಞಾನಿ ವಿವರಿಸಿದರು. "ಸೂರ್ಯನ ಬೆಳಕು ನಮ್ಮನ್ನು ಸೇರುವ ಮೊದಲು ಹವೆಯಲ್ಲಿ ಹಾಯ್ದುಕೊಂಡೇ ಬರಬೇಕು. ಹವೆಯೆಂದರೆ ಒಂದೇ ಕಡೆಗೆ ನಿಶ್ಚಲವಾಗಿರುವ ಪದಾರ್ಥವಲ್ಲ. ಅದರಲ್ಲಿನ ಅಣುಗಳು ಯಾವಾಗಲೂ ಎಲ್ಲ ದಿಕ್ಕುಗಳಲ್ಲೂ ಚಲಿಸುತ್ತಲೇ ಇರುತ್ತವೆ. ಸೂರ್ಯನ ಬೆಳಕು ಹವೆಯ ಅಣುಗಳ ಮೇಲೆ ಬಿದ್ದಾಗ, ಅತ್ತಿತ್ತ ಚದುರಿಹೋಗುತ್ತವೆ. ಹೀಗೆ ಚೆಲ್ಲಾಪಿಲ್ಲಿಯಾದ ಬೆಳಕೇ ನಮ್ಮ ಕಣ್ಣಿಗೆ ಬೀಳುವುದು. ಇಂಥ ಬೆಳಕಿನಿಂದ ನಮಗೆ ಅನೇಕ ತಪ್ಪು ಕಲ್ಪನೆಗಳಾಗುತ್ತವೆ. ಉದಾಹರಣೆಗೆ ಆಕಾಶ ನೀಲಿಯಾಗಿರುವಂತೆ ಕಾಣುತ್ತದೆ."

"ಆಕಾಶ, ನಿಜಕ್ಕೂ ನೀಲಿಯಾಗಿಲ್ಲವೆ?" ಆಚ್ಚರಿಯಿಂದ ಪೂರ್ಣಿಮಾ ಕೇಳಿದಳು.

"ಆಕಾಶವೆನ್ನುವ ಪದಾರ್ಥವೇ ಇಲ್ಲವಲ್ಲ. ಅದು ನೀಲಿಯಾಗಿರುವುದೇನು ಬಂತು" ಎಂದರು ವಿಜ್ಞಾನಿ. "ಚಂದ್ರನ ಮೇಲೆ ಇದು ಇನ್ನೂ ಸರಿಯಾಗಿ ತಿಳಿಯುತ್ತದೆ. ಇಲ್ಲಿ ಸೂರ್ಯನ ಬೆಳಕು ನೇರವಾಗಿ ನಮಗೆ ತಲಪುತ್ತದೆ. ನಡುವೆ ಎಲ್ಲಿಯೂ ಚದುರಿ ಹೋಗುವುದಿಲ್ಲ. ಆದ್ದರಿಂದ ಆಕಾಶದ ಒಂದು ಕಡೆ ಸೂರ್ಯನಿದ್ದರೂ ಉಳಿದ ಭಾಗ ಕಪ್ಪಾಗಿಯೇ ಇರುತ್ತದೆ."

ಅದನ್ನೂ ಪೂರ್ಣಿಮಾ ಗಮನಿಸಿದ್ದಳು. ಕತ್ತಲೆ ಮಾಡಿ, ಕೊನೆಯಲ್ಲಿ ಒಂದೇ ಒಂದು ಅತ್ಯಂತ ಪ್ರಕಾಶಮಾನವಾದ ದೀಪವನ್ನು ಹಚ್ಚಿದರೆ ಹೇಗೆ ಕಾಣಬಹುದೋ ಹಾಗೆಯೇ ಕಪ್ಪಾದ ಆಕಾಶದ ಕೊನೆಯಲ್ಲಿ ಸೂರ್ಯ ಕಾಣುತ್ತಿದ್ದ.

"ಆದರೆ ಸೂರ್ಯೋದಯದಲ್ಲಿ ಅವನು ಕೆಂಪಗೇಕೆ ಕಾಣುತ್ತಾನೆ? ಅದಕ್ಕೂ ಹವೆಯ ಕಾರಣವೆ?"

"ಖಂಡಿತವಾಗಿಯೂ ಪೃಥ್ವಿ ತಿರುಗುವಾಗ, ಮಧ್ಯಾಹ್ನ ನಾವು ಸೂರ್ಯನ ಎದುರಿಗೇ

ಇರುತ್ತೇವೆ. ಎಷ್ಟೇ ಚದುರಿ ಹೋದರೂ ಅವನ ಬೆಳಕು ನೇರವಾಗಿಯೇ ನಮ್ಮನ್ನು ಸೇರುತ್ತದೆ. ಆದರೆ ಸಾಯಂಕಾಲ ನಾವಿರುವ ಭಾಗ ಒಂದು ಬದಿಗೆ ತಿರುಗಿಕೊಂಡು ಬಿಟ್ಟಿರುತ್ತದೆ. ಆಗ ಸೂರ್ಯನ ಕಿರಣಗಳಿಗೆ ನೇರವಾಗಿ ನಮ್ಮ ಕಡೆಗೆ ಬರಲಿಕ್ಕೆ ಆಗುವುದಿಲ್ಲ. ಹೆಚ್ಚು ಹೆಚ್ಚು ಹವೆಯ ಪದರುಗಳನ್ನು ದಾಟಿಕೊಂಡು ಬರಬೇಕು. ಆಗ ಚದುರುವಿಕೆಯೂ ಹೆಚ್ಚು. ಜೊತೆಗೆ ಕಿರಣಗಳು ವಕ್ರಗೊಂಡು ಹೊರಮುಖವಾಗಿ ಬಾಗುತ್ತವೆ. ಅದಕ್ಕೆಂದೇ ಮುಳುಗುವ ಸೂರ್ಯ ದೊಡ್ಡವನಾಗಿಯೂ ಕೆಂಪಗೂ ಕಾಣುತ್ತಾನೆ. ಇಲ್ಲಿ ಮಾತ್ರ ಮುಂಜಾನೆಯಿಂದ ಸಂಜೆಯವರೆಗೂ ಒಂದೇ ರೀತಿಯಾಗಿ ಕಾಣುತ್ತಾನೆ."

ಸೂರ್ಯಾಸ್ತವನ್ನು ಸರಿಯಾಗಿ ನೋಡಬೇಕೆಂದು ಅವರಿಬ್ಬರೂ ಒಂದು ಚಿಕ್ಕ ಗುಡ್ಡವನ್ನು ಹತ್ತಿ ನಿಂತುಕೊಂಡರು. ಪೂರ್ಣಿಮಾಳ ಚಂದ್ರೋತ್ಸಾಹ ನಿಧಾನವಾಗಿ ಇಳಿಯಲಾರಂಭಿಸಿತ್ತು. ಈ ಲೋಕ ಪ್ರಯೋಜನವಿಲ್ಲ. ಚಂದ್ರ ನೋಡಲಿಕ್ಕಷ್ಟೇ ಚೆಂದ. ಅವನ ಮೇಲೆ ಗಿಡಗಂಟೆಗಳಿಲ್ಲ, ಹೂವುಗಳಿಲ್ಲ, ನದಿಯಿಲ್ಲ, ಸೂರ್ಯೋದಯವಿಲ್ಲ, ಸೂರ್ಯಾಸ್ತವಿಲ್ಲ, ಏನೂ ಇಲ್ಲ. ನೋಡಿದಲ್ಲೆಲ್ಲ ತಗ್ಗುಗಳು, ಗುಂಡಿಗಳು, ಸಾಲದ್ದಕ್ಕೆ ಉಲ್ಕಾಪಾತಗಳು ಬೇರೆ!

ಅವರು ಗುಡ್ಡದ ತುದಿಗೆ ಬಂದು ನಿಂತಿದ್ದಂತೆ ವಿಜ್ಞಾನಿ ಕೇಳಿದರು "ಇಲ್ಲಿಂದ ಕೆಳಗೆ ಜಿಗಿದರೆ ಏನಾಗುತ್ತದೆ?"

"ಕಾಲು ಮುರಿಯುತ್ತದೆ" ಪೂರ್ಣಿಮಾ ತಕ್ಷಣ ಹೇಳಿಬಿಟ್ಟಳು. ಏಕೆಂದರೆ ಅವರು ನಿಂತಿದ್ದ ಜಾಗ ಮೂರಂತಿಸ್ತಿನ ಮನೆಯಷ್ಟಾದರೂ ಎತ್ತರವಾಗಿತ್ತು.

"ಸರಿ ಹಾಗಾದರೆ" ಎಂದು ವಿಜ್ಞಾನಿ ಜಿಗಿದೇಬಿಟ್ಟರು! ಉಸಿರು ಬಿಗಿಹಿಡಿದು ಪೂರ್ಣಿಮಾ ನೋಡಿಯೇ ನೋಡಿದಳು. ಸಿನಿಮಾದಲ್ಲಿ ಸ್ಲೋಮೋಶನ್ ತೋರಿಸುತ್ತಾರಲ್ಲ, ಇದೂ ಹಾಗೆಯೇ ಕಂಡಿತು. ಮತ್ತೆ ಸಿನಿಮಾದಲ್ಲಿ ನಾಯಕನ ಕಾಲು ಎಂದಾದರೂ ಮುರಿಯುತ್ತದೆಯೆ? ವಿಜ್ಞಾನಿ ಸುರಕ್ಷಿತವಾಗಿ ತಳವನ್ನು ತಲಪಿದರು. ಸರಸರನೆ ಮತ್ತೊಮ್ಮೆ ಮೇಲೆ ಏರಿ ಬಂದು ಅವಳ ಹತ್ತಿರ ನಿಂತರು.

"ನಿಮಗೆ ನಿಜಕ್ಕೂ ಪೆಟ್ಟಾಗಿಲ್ಲವೆ?" ಅವಳಿಗೆ ಇನ್ನೂ ನಂಬಿಕೆಯಾಗಿರಲಿಲ್ಲ.

"ಅದಕ್ಕೆ ಉತ್ತರ ಆಮೇಲೆ ಹೇಳುತ್ತೇನೆ. ಮೊದಲು ನೀನು ಹೇಳು. ಇಷ್ಟು ಎತ್ತರದ ದಿಣ್ಣೆಯನ್ನು ಏರಿಕೊಂಡು ಬಂದಿದ್ದೀಯಲ್ಲ. ನಿನಗೆ ಆಯಾಸವಾಗಿಲ್ಲವೆ?" ವಿಜ್ಞಾನಿ ಅವಳಿಗೇ ಸವಾಲು ಹಾಕಿದರು. ತನಗೆ ಆಯಾಸ ನಿಜಕ್ಕೂ ಆಗೇ ಇಲ್ಲವೆಂಬುದು ಅವಳ ಗಮನಕ್ಕೆ ಬಂದಿತು.

"ನನಗೆ ದಣಿವಾಗದ್ದಕ್ಕೂ ನಿಮಗೆ ಪೆಟ್ಟಾಗದೇ ಇರುವುದಕ್ಕೂ ಏನು ಸಂಬಂಧ?" ಪೂರ್ಣಿಮಾ ಕೇಳಿದಳು.

"ಸಂಬಂಧವಿದೆ. ಏಕೆಂದರೆ ಎರಡರ ಮೂಲ ಕಾರಣವೂ ಒಂದೇ. ನಾವು ಭೂಮಿಯ ಮೇಲೆ ನಿಂತಿರುವಾಗ ಅದು ನಮ್ಮ ಮೇಲೆ ಬಲಹಾಕಿ ಎಳೆಯುತ್ತಿರುತ್ತದೆ. ಈ ಬಲಕ್ಕೇ ಗುರುತ್ವಾಕರ್ಷಣ ಎನ್ನುತ್ತಾರೆ. ಗುರುತ್ವಾಕರ್ಷಕ್ಕೂ ಭೂಮಿಯ ತೂಕಕ್ಕೂ ನೇರವಾಗಿ ಸಂಬಂಧವಿದೆ. ತೂಕ ಹೆಚ್ಚಾದಷ್ಟೂ ಗುರುತ್ವಾಕರ್ಷಣದ ಬಲ ಹೆಚ್ಚಾಗುತ್ತದೆ. ಈಗ ಪೃಥ್ವಿಯ ತೂಕ ಚಂದ್ರನದಕ್ಕಿಂತ ತುಂಬಾ ಹೆಚ್ಚಾಗಿದೆ. ಆದ್ದರಿಂದ ಮೇಲೆ ಏರುವಾಗ ಅಥವಾ ಕೆಳಗೆ ಜಿಗಿದಾಗ ನಮ್ಮ ಮೇಲೆ ಕೆಲಸ ಮಾಡುವ ಬಲವು, ಪೃಥ್ವಿಯ ಮೇಲೆ, ಚಂದ್ರನ ಆರು ಪಟ್ಟು ಇರುತ್ತದೆ. ಇಲ್ಲಿ ಹನ್ನೆರಡು ಮಹಡಿಯನ್ನು ಏರಿದಾಗ ಆಗುವ ದಣಿವು ಎರಡು ಮಹಡಿ ಏರುವಾಗಲೆ ಆಗಿರುತ್ತದೆ."

"ಅಲ್ಲಿ ಕುರ್ಚಿಯಲ್ಲಿ ಕೆಳಕ್ಕೆ ಜಿಗಿದರೆ ಆಗುವಷ್ಟೇ ಪೆಟ್ಟು ಇಲ್ಲಿ ಮಹಡಿಯಿಂದ ಜಿಗಿದರೆ ಆಗುತ್ತದೆ" ಪೂರ್ಣಿಮಾ ಪೂರ್ತಿ ಮಾಡಿದಳು. ಚಂದ್ರಲೋಕ ಸ್ವಲ್ಪ ಸಮೀಪವಿದ್ದರೆ ದಿನವೂ ಆಟವಾಡಲು ಬರಬಹುದಿತ್ತು ಎಂದುಕೊಂಡಳು. ಇಲ್ಲಿ ಎಷ್ಟು ಕುಣಿದು ಕುಪ್ಪಳಿಸಿದರೂ ದಣಿವೇ ಆಗಲಿಕ್ಕಿಲ್ಲ. ಎಷ್ಟು ಎತ್ತರದಿಂದಲೂ ಕೆಳಕ್ಕೆ ಜಿಗಿಯಬಹುದು! ತಾನೂ ನಿಂತ ಜಾಗದಿಂದ ಕೆಳಗೆ ಹಾರಿ ನೋಡಲೇ ಎಂಬ ವಿಚಾರವೂ ಬಂದುಹೋಯಿತು. ಆದರೆ ಧೈರ್ಯ ಮಾತ್ರ ಆಗಲಿಲ್ಲ! ಭೂಮಿಯ ಮೇಲೆ ಬೆಳೆಸಿಕೊಂಡ ಹೆದರಿಕೆಗಳು ಅಷ್ಟು ಸುಲಭವಾಗಿ ಹೋಗಿಬಿಡುತ್ತವೆಯೆ? ಕೊನೆಗೂ ಧೈರ್ಯಮಾಡಿ ಅರ್ಧ ಎತ್ತರದಿಂದ ಕೆಳಗೆ ಜಿಗಿದೇ ಬಿಟ್ಟಳು.

ಅಂತರಾಳದಲ್ಲಿ ತೇಲುವ ಅನುಭವ ಅದು ಮೊದಲ ಸಲ ಅವಳಿಗೆ ಆಯಿತು. ಎರಡೇ ಸೆಕೆಂಡುಗಳಲ್ಲಿ ಅವಳು ನೆಲ ಸೇರಿದರೂ ಹಲವಾರು ನಿಮಿಷ ಅಂತರಿಕ್ಷದಲ್ಲಿ ಇದ್ದಂತೆ ಭಾಸವಾಯಿತು. ಭೂಮಿಯ ಮೇಲೆ ಮಕ್ಕಳಿಗೆ ಇಂಥಾ ಅನುಭವ ಎಲ್ಲಿಯಾದರೂ ಸಿಕ್ಕೀತೆ? ಇಲ್ಲವೇ ಇಲ್ಲ. ಮತ್ತೆ ಮತ್ತೆ ಮೇಲೆ ಏರಿ ಕೆಳಕ್ಕೆ ಹಾರಿದ್ದೂ ಹಾರಿದ್ದೇ.

ಒಂದು ಗಂಟೆಯಿಂದಲೂ ಕೆಳಗೆ ಇಳಿಯುತ್ತಿದ್ದ ಸೂರ್ಯ ಈಗ ಪೂರ್ಣವಾಗಿ ಅದೃಶ್ಯನಾಗಿಬಿಟ್ಟ. ಅವರ ಚಂದ್ರನೌಕೆಯ ಮಿಣುಕುವ ದೀಪ ಮತ್ತು ನಕ್ಷತ್ರಗಳನ್ನು ಬಿಟ್ಟರೆ ಬೇರೆ ಬೆಳಕೇ ಇರಲಿಲ್ಲ.

"ಈಗೇನು ಮಾಡುವುದು?" ಪೂರ್ಣಿಮಾ ಕೇಳಿದಳು.

"ಈಗೊಂದು ಸುಂದರ ದೃಶ್ಯ ಕಾಣಲಿದೆ. ನಿನ್ನ ಹಿಂದೆ ನೋಡು.

"ನನ್ನ ಹಿಂ ..."

ತೆರೆದ ಬಾಯಿಯನ್ನು ಮುಚ್ಚಲೂ ಅವಳಿಗೆ ಮರೆತುಹೋಯಿತು. ಕ್ಷಿತಿಜದಲ್ಲಿ ದೊಡ್ಡದಾದ ನೀಲಿ ಗೋಳವೊಂದು ಮೇಲೇಳುತ್ತಿತ್ತು. ಹುಣ್ಣಿಮೆ ಚಂದ್ರನ ನಾಕು ಪಟ್ಟಾದರೂ ಅದರ ಆಕಾರವಿರಬೇಕು. ಆದರೆ ಏನು ಹೊಳಪು! ಅದರ ಝುಗಝುಗಿಸುವ ನೀಲಿ ಬಣ್ಣದ ಎದುರು ಚಂದ್ರನ ಕೆನೆಬಣ್ಣವನ್ನು ನಿವಾಳಿಸಿ-ಒಗೆಯಬೇಕು! ಇಡೀ ಗೋಳ ಕಣ್ಣೆದುರು ಬಂದ ಮೇಲೆಯೇ ಪೂರ್ಣಿಮಾಳಿಗೆ ಮಾತು ನೆನಪಾಯಿತು.

"ಏನದು" ಅವಳು ಕೇಳುದಳು.

"ಗೊತ್ತಿಲ್ಲವೆ? ಉತ್ತರ ತುಂಬ ಸರಳವಾಗಿದೆ. ಸ್ವಲ್ಪ ನೀನೇ ವಿಚಾರ ಮಾಡು" ಎಂದರು ವಿಜ್ಞಾನಿ.

"... ..."

"ಹುಚ್ಚು ಹುಡುಗಿ. ಪೃಥ್ವಿಯ ಮೇಲೆ ನಿಂತರೆ, ರಾತ್ರಿ ಆಕಾಶದಲ್ಲಿ ಕಾಣುವುದು ಚಂದ್ರ. ಚಂದ್ರನ ಮೇಲೆ ನಿಂತರೆ ರಾತ್ರಿ ಆಕಾಶದಲ್ಲಿ ಕಾಣಬೇಕಾದದ್ದು..."

"... ಪೃಥ್ವಿ!" ಉದ್ಗರಿಸಿದಳು ಪೂರ್ಣಿಮಾ. ಪೃಥ್ವಿಯಲ್ಲದೇ ಬೇರೇನು? ನಿಜ ಹೇಳ ಬೇಕೆಂದರೆ ಅಂದಿನವರೆಗೆ ಪೃಥ್ವಿ ದುಂಡಗಿದೆಯೆಂದು ಅವಳಿಗೆ ನಂಬಿಕೆಯೇ ಆಗಿರಲಿಲ್ಲ. ಎಲ್ಲಿ ನೋಡಿದರೂ ಸಪಾಟವಾಗಿಯೇ ಇರುವ ಭೂಮಿ ದುಂಡಗಿದೆ ಎಂದರೇನು? ಅವಳ ಸಂಶಯಗಳೆಲ್ಲ ಈಗ ತಲೆಕೆಳಗಾಗಿದ್ದವು. ಪುರಾವೆ ಇತ್ತಲ್ಲ. ಆದರೆ ಈಗ ಇನ್ನೊಂದು ಸಂಶಯ ಉಂಟಾಯಿತು. "ಚಂದ್ರನಿಗೆ ಹುಣ್ಣಿಮೆ ಅಮಾವಾಸ್ಯೆಗಳಿರುವಂತೆ ಭೂಮಿಗೂ ಇರುತ್ತದೆಯೆ?"

"ಏಕಿರಬಾರದು? ಹುಣ್ಣಿಮೆ ಅಮಾವಾಸ್ಯೆಗಳು ಹೀಗೆಯೇ ಉಂಟಾಗುವುದು. ಚಂದ್ರನ ಮೇಲೆ ನಿಂತು ಪೃಥ್ವಿಯನ್ನು ನೋಡಿದಾಗಲೂ ಇದೇ ಪರಿಣಾಮಗಳು ಕಂಡುಬರುತ್ತವೆ. ಕೆಲವೊಮ್ಮೆ ಅರ್ಧ ಪೃಥ್ವಿ ಕೆಲವೊಮ್ಮೆ ಇಡೀ ಪೃಥ್ವಿಗಳು ಕಂಡು ಬರುತ್ತವೆ. ಅಂದರೆ ಇಲ್ಲಿಯೂ ಹುಣ್ಣಿಮೆ, ಅಮಾವಾಸ್ಯೆಗಳಿವೆ."

"ಹಾಗಾದರೆ ಇವತ್ತು ಹುಣ್ಣಿಮೆಯೆ?"

"ನೀನು ಬಂದ ದಿನ ಹುಣ್ಣಿಮೆಯಲ್ಲದೇ ಇನ್ನೇನಾಗಿರಬಹುದು? ಆದರೆ ಈಗ ನಾವು ಹೋಗಬೇಕು. ಇಲ್ಲಿ ತುಂಬ ವೇಳೆ ಕಳೆದಿದ್ದೇವೆ" ವಿಜ್ಞಾನಿ ಎಚ್ಚರಿಸಿದರು. ಪೂರ್ಣಿಮಾಳಿಗೆ ಆ ಜಾಗ ಬಿಡಲು ಮನಸ್ಸೇ ಇರಲಿಲ್ಲ. ಅನಿವಾರ್ಯವಾಗಿ ಹೊರಟು ನಿಂತಳು. ಕೊಟ್ಟ ಕೊನೆಯ ಬಾರಿಗೊಮ್ಮೆ ಹಿಂದಕ್ಕೆ ತಿರುಗಿ ನೋಡಿದಳು. ಆಕಾಶದಲ್ಲಿ ಪೃಥ್ವಿ ತೂಗುಬಿಟ್ಟ ದೀಪದಂತೆ ಉಜ್ವಲವಾಗಿತ್ತು. ಅದರ ಬೆಳಕಿನಲ್ಲಿ ಚಂದ್ರನ ಮೇಲೆ ತಾವಿಬ್ಬರೂ ಮೂಡಿಸಿದ ಹೆಜ್ಜೆಯ ಗುರುತುಗಳು ಕಂಡುಬರುತ್ತಿದ್ದವು.

ಇದ್ದಕಿದ್ದಂತೆ ಅವಳಿಗೊಂದು ವಿಚಾರ ಬಂತು. ಈ ಹೆಜ್ಜೆಯ ಗುರುತುಗಳು ಅಳಿಸಿ ಹೋಗುವುದಿಲ್ಲ! ಒಂದು ಚೂರೂ ಗಾಳಿ ಬೀಸದ ಈ ಲೋಕದಲ್ಲಿ, ನೆಲದ ಮೇಲಿನ ಒಂದು ಸಣ್ಣ ಧೂಳಿನ ಕಣವೂ ಅತ್ತಿತ್ತ ಚಲಿಸಲಾರದು. ಉಲ್ಕಾಪಾತವಾಗದಿದ್ದಲ್ಲಿ, ಅಥವಾ ಬೇರೆ ಯಾರಾದರೂ ಬೇಕೆಂದೇ ಅಳಿಸದಿದ್ದಲ್ಲಿ, ತನ್ನಂಥ ಒಬ್ಬ ಪುಟ್ಟ ಹುಡುಗಿಯ ಹೆಜ್ಜೆಗಳು ಇಲ್ಲಿ ಅಜರಾಮರವಾಗಿ, ಅಚ್ಚಳಿಯದೇ ಉಳಿಯಲಿವೆ. ಎಂಥಾ ವಿಚಿತ್ರ, ಲೋಕವಿದು!

7

# ಸಿಗಡಿ ಯಾಕೆ ಒಣಗಲಿಲ್ಲ

**ಪಂಜೆ**

ಒಂದು ಊರಲ್ಲಿ ಕಡಲಿನ ದಡದ ಮೇಲೆ ಒಂದು ಗುಡಿಸಲು ಇತ್ತು. ಅದರಲ್ಲಿ ಒಬ್ಬ ಮೊಗೇರನು, ಅವನ ಹೆಂಡತಿ, ಅವನ ಮಗು, ಅವನ ಅಜ್ಜಿ — ಹೀಗೆ ನಾಲ್ವರು ವಾಸವಾಗಿದ್ದರು. ಕಡಲಿಗೆ ಹೋಗಿ ಮೀನು ಹಿಡಿಯುವುದು ಆ ಮೊಗೇರನ ಕೆಲಸ. ಅವನು ಹಿಡಿದು ತಂದ ಮೀನನ್ನು ಪೇಟೆಗೆ ಕೊಂಡು ಹೋಗಿ ಮಾರುವುದು ಅವನ ಹೆಂಡತಿಯ ಕೆಲಸ. ಅವಳು ಮಾರಿ ಉಳಿದ ಮೀನನ್ನು ಬಿಸಿಲಿಗೆ ಹಾಕಿ ಒಣಗಿಸುವುದು ಅಜ್ಜಿಯ ಕೆಲಸ. ಅಳುತ್ತಾ ಇರುವುದು ಮಗುವಿನ ಕೆಲಸ.

ಹೀಗಿರಲು ಒಂದು ದಿನ ಆ ಮೊಗೇರನು ಬಲೆಯನ್ನು ತೆಗೆದುಕೊಂಡು, ಸಣ್ಣ ದೋಣಿಯಲ್ಲಿ ಕೂತುಕೊಂಡು ಮೀನು ಹಿಡಿಯುವುದಕ್ಕೆ ಸಮುದ್ರಕ್ಕೆ ಹೋದನು. ಅವನ ಹೆಂಡತಿಯು ಮೀನು ಮಾರುವುದಕ್ಕೆ ಪೇಟೆಗೆ ಹೋದಳು. ಮನೆಯಲ್ಲಿ ಅಜ್ಜಿಯು ಮೀನನ್ನು ಬಿಸಿಲಿಗೆ ಹಾಕಿ ಒಣಗಿಸುತ್ತಿದ್ದಳು. ಮೊಗೇರನ ಮಗುವು ಒಂದು ಚಾಪೆಯ ಮೇಲೆ ಅಳುತ್ತಾ ಇತ್ತು. ಮುದುಕಿಯು ಜಗುಲಿಯ ಮೇಲೆ ಕೂತುಕೊಂಡು ಒಂದು ಕೈಯಿಂದ ಮಗುವಿನ ಬೆನ್ನನ್ನು ತಟ್ಟುತ್ತಾ, ಮತ್ತೊಂದು ಕೈಯಿಂದ ಕಾಗೆಗಳನ್ನು ಅಟ್ಟುತ್ತಾ ಇದ್ದಳು.

ಹೊತ್ತು ಇಳಿಯಿತು. ಸಮುದ್ರಕ್ಕೆ ಹೋದ ಮೊಗೇರನೂ, ಪೇಟೆಗೆ ಹೋದ ಅವನ ಹೆಂಡತಿಯೂ ಮನೆಗೆ ಬರುವ ಹೊತ್ತಾಯಿತು. ಆಗ ಮುದುಕಿಯು "ಬಿಸಿಲು ಇಳಿಯಿತು; ಇನ್ನು ಈ ಸಿಗಡಿ ಮೀನನ್ನು ಗೋರಿ, ಒಳಗೆ ತರುತ್ತೇನೆ" ಎಂದು ಹೇಳಿ, ಅಂಗಳಕ್ಕೆ ಇಳಿದು ಸಿಗಡಿ ಮೀನನ್ನು ಮುಟ್ಟಿ ನೋಡಿದಳು. ಸಿಗಡಿ ಒಣಗಿರಲಿಲ್ಲ.

ಆಗ ಆ ಮುದುಕಿ "ಸಿಗಡೀ, ಸಿಗಡೀ, ನೀನು ಯಾಕೆ ಒಣಗಲಿಲ್ಲ?" ಎಂದು ಕೇಳಿದಳು.

ಅದಕ್ಕೆ ಸಿಗಡಿ "ಅಜ್ಜೀ ಅಜ್ಜೀ, ಹುಲ್ಲು ಬೆಳೆದು ಬಿಸಿಲು ತಾಗದೆ ಇದ್ದರೆ, ನಾನು

ಹೇಗೆ ಒಣಗಲಿ? ನೀನು ನನ್ನನ್ನು ಯಾಕೆ ಕೇಳುತ್ತೀ? ಹುಲ್ಲನ್ನು ಕೇಳು?" ಎಂದಿತು.

ತರುವಾಯ ಮುದುಕಿ ಹುಲ್ಲಿನ ಬಳಿಗೆ ಹೋಗಿ "ಹುಲ್ಲೇ, ಹುಲ್ಲೇ, ನೀನು ಯಾಕೆ ಬಿಸಿಲಿಗೆ ಅಡ್ಡವಾದೀ?" ಎಂದು ಕೇಳಿದಳು.

ಅದಕ್ಕೆ ಹುಲ್ಲು "ಅಜ್ಜೀ ಅಜ್ಜೀ, ಕರು ನನ್ನನ್ನು ತಿನ್ನದೆ ಇದ್ದರೆ, ನಾನು ಏನು ಮಾಡಲಿ? ನೀನು ನನ್ನನ್ನು ಯಾಕೆ ಕೇಳುತ್ತೀ? ಕರುವನ್ನು ಕೇಳು?" ಎಂದಿತು.

ತರುವಾಯ ಮುದುಕಿ ಕರುವಿನ ಬಳಿಗೆ ಹೋಗಿ "ಕರುವೇ, ಕರುವೇ, ನೀನು ಯಾಕೆ ಹುಲ್ಲು ತಿನ್ನಲಿಲ್ಲ?" ಎಂದು ಕೇಳಿದಳು.

ಅದರೆ ಕರುವು "ಅಜ್ಜೀ ಅಜ್ಜೀ, ಧನಿಯ ಹೆಣ್ಣು ನನ್ನನ್ನು ಬಿಚ್ಚಿ ಬಿಡದಿದ್ದರೆ, ನಾನು ಹೇಗೆ ಹುಲ್ಲು ತಿನ್ನಲಿ? ನೀನು ನನ್ನನ್ನು ಯಾಕೆ ಕೇಳುತ್ತೀ? ಹೆಣ್ಣನ್ನು ಕೇಳು?" ಎಂದಿತು.

ಅಷ್ಟರಲ್ಲಿ ಆ ಮೊಗೇರನ ಹೆಂಡತಿ ಮನೆಗೆ ಬಂದಳು. ಆಗ ಮುದುಕಿ ಅವಳ ಬಳಿಗೆ ಹೋಗಿ, "ಹೆಣ್ಣೇ, ಹೆಣ್ಣೇ, ನೀನು ಕರುವನ್ನು ಯಾಕೆ ಬಿಚ್ಚಿ ಬಿಡಲಿಲ್ಲ?" ಎಂದು ಕೇಳಿದಳು.



ಅದಕ್ಕೆ ಮೊಗೇರನ ಹೆಂಡತಿ "ಅಜ್ಜೀ ಅಜ್ಜೀ, ಮಗು ಅಳುವುದನ್ನು ನಿಲ್ಲಿಸದೆ ಇದ್ದರೆ, ನಾನು ಹೇಗೆ ಕರುವನ್ನು ಬಿಚ್ಚಿ ಬಿಡಲಿ? ನೀನು ನನ್ನನ್ನು ಯಾಕೆ ಕೇಳುತ್ತೀ? ಮಗುವನ್ನು ಕೇಳು?" ಎಂದಳು.

ತರುವಾಯ ಮುದುಕಿ ಮಗುವಿನ ಬಳಿಗೆ ಹೋಗಿ, "ಮಗುವೇ, ಮಗುವೇ? ನೀನು ಯಾಕೆ ಅಳುವುದನ್ನು ನಿಲ್ಲಿಸಲಿಲ್ಲ?" ಎಂದು ಕೇಳಿದಳು.

ಅದಕ್ಕೆ ಮಗು "ಅಜ್ಜೀ ಅಜ್ಜೀ, ಇರುವೆ ನನ್ನನ್ನು ಕಚ್ಚಿದರೆ ನಾನೇನು ಮಾಡಲಿ? ನೀನು ನನ್ನನ್ನು ಯಾಕೆ ಕೇಳುತ್ತೀ? ಇರುವೆಯನ್ನು ಕೇಳು?" ಎಂದಿತು.

ತರುವಾಯ ಮುದುಕಿಯು ಇರುವೆಯ ಬಳಿಗೆ ಹೋಗಿ, "ಇರುವೆಯೇ, ಇರುವೆಯೇ ನೀನು ಯಾಕೆ ಮಗುವನ್ನು ಕಚ್ಚಿದೆ?" ಎಂದು ಕೇಳಿದಳು.

ಅದಕ್ಕೆ ಇರುವೆ "ಅಜ್ಜೀ ಅಜ್ಜೀ, ಮಗುವಿನ ಚಾಪೆ ನನ್ನನ್ನು ತಡೆದರೆ ನಾನೇನು ಮಾಡಲಿ? ನೀನು ಚಾಪೆಯನ್ನು ಮಡಚಿ, ನನಗೆ ಹೋಗಲಿಕ್ಕೆ ಬಿಡು. ನಾನು ಕಚ್ಚುವುದಿಲ್ಲ" ಎಂದಿತು.

ಆಮೇಲೆ ಮುದುಕಿ ಮಗುವನ್ನು ಎತ್ತಿಕೊಂಡು ಚಾಪೆಯನ್ನು ಮಡಚಿದಳು. ಇರುವೆ ಕಚ್ಚದೆ ಹೊರಟುಹೋಯಿತು. ಮಗುವು ಅಳುವುದನ್ನು ನಿಲ್ಲಿಸಿತು. ಮಗುವಿನ ತಾಯಿ ಕರುವನ್ನು ಬಿಚ್ಚಿ ಬಿಡಿಸಿದಳು. ಕರು ಹುಲ್ಲನ್ನು ತಿಂದಿತು. ಆಮೇಲೆ ಬಿಸಿಲು ಬಿದ್ದು ಮೀನು ಒಣಗಿತು. ಮುದುಕಿ ಸಿಗಡಿಯನ್ನು ಗೋರಿ ಒಳಗೆ ತೆಗೆದುಕೊಂಡು ಹೋದಳು.



8

# ಮೇಲುದುರ್ಗದ ನೋಟ

**ಹ. ವಿ. ಚಂದ್ರಶೇಖರ**

ಬೇಸಿಗೆಯ ರಜವಾದ್ದರಿಂದ ದಾವಣಗೆರೆಯಿಂದ ಹೊರಟ ಶಾರದತ್ತೆ ಮಕ್ಕಳಾದ ಶಕ್ಕು ಮತ್ತು ನಾರಾಯಣರನ್ನು ಕರೆದುಕೊಂಡು ಭದ್ರಾವತಿಯ ಅಣ್ಣನ ಮನೆಗೆ ಬಂದರು. ಅಲ್ಲಿಂದ ಅಣ್ಣನ ಮಕ್ಕಳಾದ ಕಾಂತ, ಯಶೋದ, ಮಂಜು ಮತ್ತು ಮೂರಡಿ (ಪದ್ದು) ತಮ್ಮ ದಂಡಿಗೆ ಸೇರಿಸಿಕೊಂಡು ಚಿತ್ರದುರ್ಗದ ಮಡಿಲಲ್ಲಿ ಮುದ್ದಾಗಿ ಮಲಗಿದ್ದ ತಮ್ಮ ತವರೂರು ಸೊಲ್ಲಾಪುರಕ್ಕೆ ಬಂದರು. ಮಕ್ಕಳಿಗೆಲ್ಲ ಅಜ್ಜ-ಅಜ್ಜಿಯರ ಮನೆ ಕುಣಿತಕ್ಕೆ ಅನುವಾಗಿತ್ತು.

ಮೊದಲ ದಿನ ಮನೆ ಅಟ್ಟ-ಹಟ್ಟಿ ಎಲ್ಲದರ ಅಜಮಾಯಿಶಿ ಮಾಡಿದರು. ಎರಡನೆಯ ದಿನ ಶಾರದತ್ತೆಯನ್ನು ಅಜ್ಜಿಯ ಜೊತೆಗೆ ಮಾತನಾಡಿಕೊಳ್ಳಲು ಬಿಟ್ಟು ಚಿಕ್ಕಪ್ಪ ನಾರಾಯಣ ಅಣ್ಣನ ಜೊತೆಗೆ ಮೇಲುದುರ್ಗವನ್ನು ಕಾಣಲು ಹೊರಟರು.

ಮರುದಿನ ಬೆಳಿಗ್ಗೆ ಎಲ್ಲರೂ ತಿಂಡಿ ತಿಂದು ಬುಟ್ಟಿಗಷ್ಟು ತುಂಬಿಕೊಂಡು ಸಜ್ಜಾದರು. ಪುಟ್ಟ ನಾರಾಯಣನ ಜೊತೆ ಶಾರದತ್ತೆಯೂ ಮನೆಯಲ್ಲೇ ಉಳಿದರು. ನಾರಾಯಣ ಕಾಕಪ್ಪ ಹುಡುಗರ ಜೊತೆ ಹುಡುಗರಾಗಿ ದುರ್ಗದ ಕೋಟೆ ಮುಂತಾದುವನ್ನು ತೋರಿಸಲು ಹೊರಟರು.

"ಏನಪ್ಪಾ ಕಾಂತಣ್ಣ, ತಿಂಡಿ ತೀರ್ಥ ಸರಿಯಾಗಿ ಕಟ್ಟಿಕೊಂಡಿದ್ದೀರೋ ಅಲ್ಲಿಯ ವನಭೋಜನಕ್ಕೆ? ಆಮೇಲೆ ಒಣಭೋಜನ ಆದೀತು" ಎಂದು ನಕ್ಕರು. ಅನಂತರ "ಲೇ, ರಾಮ, ಬುರುಜನ ಹಟ್ಟಿಯಿಂದ ದುರ್ಗ ಏರತೀಯಲ್ಲ ಅಲ್ಲಿ ಗಾಡಿ ನಿಲ್ಲಿಸು" ಎಂದು ಗಾಡಿ ಹೊಡೆಯುವ ರಾಮನಿಗೆ ಕೂಗಿ ಹೇಳಿದರು.

ದಾರಿಯಲ್ಲಿ ಅವರು ನಾಯಕರ ಮನೆತನ ದುರ್ಗವನ್ನು ಆಳಲು ಹೇಗೆ ಮೊದಲಿಟ್ಟಿತೆಂದು ಹೇಳಿದರು. "ತುಂಬಾ ಹಿಂದೆ ಇಲ್ಲೆಲ್ಲ ಕಾಡು ಕಾಡಾಗಿದ್ದು ಜನ ದನ ಕುರಿ ಮೇಯಿಸ್ತ ಇದ್ದರು. ಆಗೊಂದು ಸಲ ಒಬ್ಬರು ಸ್ವಾಮಿಗಳು ಈ ಮಾರ್ಗವಾಗಿ

ಹೋಗುತ್ತಾಯಿದ್ದರು. ದಾರಿಯಲ್ಲಿ ಒಬ್ಬ ಪ್ರಾಯದ ಹುಡುಗ, ದನಗಳನ್ನು ಮೇಯಕ್ಕೆ ಬಿಟ್ಟು ಮರದ ನೆರಳಲ್ಲಿ ಒಳ್ಳೆ ಶ್ರೀಮನ್ನಾರಾಯಣನ ಹಾಗೆ ಮಲಗಿದ್ದ. ಸ್ವಾಮಿಗಳು ಒಂದು ಕ್ಷಣ ಹಾಗೆ ನೋಡಿದರು. ಬಿಸಿಲು ಹೊರಳಿ ಅವನ ಮೈ ಮೇಲೆ ಮರದ ನೆರಳಿಲ್ಲ. ತಲೆಯ ಮೇಲೆ ಮಾತ್ರವಿದೆ. ಇದು ಹೇಗೆ ಅಂತ ಮೇಲೆ ನೋಡಿದರು ಅವರು. ಏಳು ಹೆಡೆಯ ನಾಗಪ್ಪ ಆಡುತ್ತ ತನ್ನ ತಲೆಯನ್ನು ಬಿಸಿಲಿಗೊಡ್ಡಿ ಈ ಹುಡುಗನ ತಲೆಗೆ ನೆರಳು ಮಾಡ್ತಿದೆ. ಆಗ ಚೆನ್ನಾಗಿ ನೋಡಿ ಅವನಿಗೆ ರಾಜಲಕ್ಷಣ ಇದೆ ಅನ್ನೋದನ್ನು ಕಂಡುಕೊಂಡರು. ಆಮೇಲೆ ನೀನು ರಾಜನಾಗ್ತೀಯಪ್ಪ ಅಂತ ಅವನಿಗೆ ಹೇಳಿದಾಗ, ಅವನು ಹಾಗಾದರೆ ನೀವೆ ನನ್ನ ಗುರುಗಳಾಗಿ ನಿಲ್ಲಬೇಕು ಅಂತ ಕೇಳಿಕೊಂಡು ನಮಸ್ಕಾರ ಮಾಡಿದ. 'ನಿಮ್ಮ ವಂಶದವರು ಈ ದುರ್ಗದ ಸೀಮೆಗೆ ಅರಿತರೆ ಆರು ಪಟ್ಟ ಮರೆತರೆ ಮೂರು ಪಟ್ಟ ಆಳ್ತಾರೆ' ಅಂತ ಹೇಳಿ ಅವರು ಇಲ್ಲೇ ಸ್ವಾಮಿಗಳಾಗಿ ನಿಂತರು. ಅವರೇ ಇಲ್ಲಿನ ಮುರುಘಾ ಮಠಕ್ಕೆ ಮೂಲಪುರುಷರು."

"ಅರಿತರೆ ಆರು ಪಟ್ಟ ಮರೆತರೆ ಮೂರು ಪಟ್ಟ ಅಂದರೇನು ಕಾಕಪ್ಪ?" ಮಂಜು ಕೇಳಿದ.

"ಅಂದರೆ ವಿವೇಕವಾಗಿ ಅರಿತುಕೊಂಡು ನಡೆದರೆ ನಿಮ್ಮ ವಂಶದ ಆರು ಜನರು ಇಲ್ಲಿಯ ಪಟ್ಟವನ್ನು ಕಟ್ಟಿಸಿಕೊಳ್ಳುತ್ತಾರೆ, ಅಲ್ಲದೆ ಮೈ ಮರೆತು ಸೊಕ್ಕಿದರೆ ಮೂರು ತಲೆಮಾರಿಗೆ ನಿಮ್ಮ ವಂಶದ ಆಳ್ವಿಕೆ ಮುಗಿಯುತ್ತದೆ ಅಂತ ಅರ್ಥ."

"ಕೊನೆಗೇನಾಯಿತು?" ಕುತೂಹಲಪಟ್ಟಳು ಶಕ್ಕು.

"ಮೂರೇ ಜನ ಸಮರ್ಥರಾಗಿ ಆಳಿದ್ದು. ಮದಕರಿನಾಯಕನೆ ಮೂರನೆಯವನು. ಅವನು ಸ್ವಲ್ಪ ಅಹಂಕಾರದಿಂದ ಇದ್ದುಬಿಟ್ಟ. ಸ್ವಾಮಿಗಳು ಈ ಸೀಮೆ ಬಿಟ್ಟು ಹೋಗ್ತೇವೆ ಅಂದರು. ಅವನು ಪಶ್ಚಾತ್ತಾಪ ಪಟ್ಟು ಇಲ್ಲೇ ಇರಬೇಕು ಅಂತ ಬಹಳ ಕೇಳಿಕೊಂಡಿದ್ದಕ್ಕೆ, ನಾವು ನಿನ್ನ ರಾಜ್ಯದಲ್ಲಿರುತ್ತೇವೆ. ಈಗಿನ ಹಾಗೆ ನಿನ್ನ ಬಳಿಯಲಿಲ್ಲದಿದ್ದರೂ ನಿನಗೆ ಆಪ್ತರಾಗಿರುತ್ತೇವೆ ಎಂದು ಹೇಳಿ, ತಮ್ಮ ಕೈಯಲ್ಲಿದ್ದ ಬಡಿಗೆಯನ್ನು ದುರ್ಗದ ಬತೇರಿಯ ಮೇಲಿಂದ ಬೀಸಿ ಒಗೆದು, ಅದೆಲ್ಲಿ ಬಿದ್ದಿದೆಯೋ ಅಲ್ಲಿ ನಮಗೊಂದು ಮಟ ಕಟ್ಟಿಸು ಎಂದರು. ಅಲ್ಲಿ ಕಟ್ಟಿದ್ದೇ ಈಗಿನ ಮುರುಘಾ ಮಠ."

"ಅಬ್ಬಬ್ಬಾ!" ಎಂದು ಅಚ್ಚರಿಗೊಂಡ ಮಂಜು.

ಆ ವೇಳೆಗೆ ದುರ್ಗವನ್ನೇರುವ ಮಾರ್ಗವನ್ನು ಸಮೀಪಿಸಿ ಗಾಡಿ ನಿಂತಿತು. ಎಲ್ಲರೂ ಇಳಿದು ಕೂಗಾಡುತ್ತ ಮೇಲುದುರ್ಗದ ಹಾದಿಯನ್ನು ಹಿಡಿದರು. ಅಲ್ಲಲ್ಲಿ ಮೆಟ್ಟಲುಗಳನ್ನು ಎಣಿಸಿಕೊಳ್ಳುತ್ತಾ ಏರತೊಡಗಿದರು.

"ಊರಲ್ಲಿರೋದೆ ಸಂತೇಹೊಂಡ. ನಮ್ಮ ಮದಕರಿನಾಯಕ ಬಹಳ ಬುದ್ಧಿವಂತ, ಗೊತ್ತೋ ನಿಮಗೆಲ್ಲ? ನಮ್ಮ ಸೀಮೆಗೆ ಮಳೆ ಬಹಳ ಕಡಿಮೆ. ಅದ್ದರಿಂದಲೇ ಇಲ್ಲಿ ದುರ್ಗದ ಮೇಲೆ ಬಿದ್ದ ನೀರು ಒಂದು ಹನಿಯೂ ಪೋಲಾಗದ ಹಾಗೆ ಏರ್ಪಾಡು ಮಾಡಿದ್ದಾನೆ."

"ಹ್ಯಾಗೆ ಮಾಡಿದ್ದಾನಣ್ಣ?" ರವಿ ಕೇಳಿದ.

"ಬಿದ್ದ ಮಳೆ ನೀರೆಲ್ಲ ಗುಡ್ಡಗಳಿಂದ ಸುರಿದು ಮೊದಲು ಗೋಪಾಲಸ್ವಾಮಿ ಹೊಂಡಕ್ಕೆ ತುಂಬುತ್ತೆ. ಅದು ತುಂಬಿ ಉಳಿದ ನೀರು, ತಣ್ಣೀರದೋಣಿ ಮಾರ್ಗವಾಗಿ ಬರಿಗೇರಮ್ಮನ ಹೊಂಡಕ್ಕೆ ಬಂದು ಸೇರುತ್ತೆ. ಅದೂ ತುಂಬಿದ ಮೇಲೆ ನೀರು ಊರೊಳಗೇ ಹರಿದು ಸಂತೇಹೊಂಡಕ್ಕೆ ತುಂಬಿಕೊಳ್ಳುತ್ತೆ."

"ರೈಲು ನಿಲ್ದಾಣದ ಹತ್ತಿರ ಬರಿಗೆರೆ ಅಂತಿದೆ. ಅದರಲ್ಲಿ ನೀರೆ ಇಲ್ಲ. ಆದೇನೆ ಬರಿಗೇರಮ್ಮನ ಹೊಂಡ?" ಯಶೋದ ಕೇಳಿದಳು.

"ಅದು ಬೇರೆ. ಅದನ್ನು ಒಬ್ಬ ಜಿಪುಣ ಸಾಹುಕಾರ ಕಟ್ಟಿಸಿದ. ಕೆರೆ ತೋಡುವ ಕಲ್ಲು ಕಟೆಯುವ ಒಡ್ಡರಿಗೆಲ್ಲ ರಾತ್ರಿ ಹೊತ್ತು ಒಂದು ಕುರುಡು ಬೆಳಕಿನಾಗೆ, ಸೇರು ತಲೆಕೆಳಗಾಗಿಟ್ಟುಕೊಂಡು ಹೊನ್ನು ಅಳೆಯುತ್ತಿದ್ದ. ಅವರೆಲ್ಲ ಕೊನೆಗೆ ಬೇಸತ್ತು ನಿನ್ನ ಕೆರೆ ಬರಿದಾಗಲಿ ಎಂದು ಶಾಪ ಹಾಕಿ ಹೋದರು. ಅದಕ್ಕೆ ತಕ್ಕಹಾಗೆ ಆ ಕೆರೆ ಮಳೆಗಾಲದಲ್ಲಿ ಬಿಟ್ಟರೆ ಉಳಿದೆಲ್ಲ ಕಾಲವೂ ಬರಿದೋ ಬರಿದು!"

"ಮೋಸ ಮಾಡಿದ್ದಕ್ಕೆ ತಕ್ಕ ಶಾಸ್ತಿ ಆಯಿತು" ಎಂದು ಲೀಲಾ ನಕ್ಕಳು.

"ಅದ್ದರಿಂದ ಯಾರಿಗೂ ಮೋಸ ಮಾಡಬಾರದು ಎಂಬದು ನೀತಿ" ಎನ್ನುತ್ತಾ ಅನಂತು ತನ್ನ ತೋರುಬೆರಳನ್ನು ಮೇಲಕ್ಕೆ ನೀಡಿ ಘೋಷಣೆ ಮಾಡಿದ.

"ಏ ನಡಿಯೋ ಮಂಗ, ಹಾಗೆಲ್ಲ ಮೇಷ್ಟರನ್ನು ಅಣಕಿಸಬಾರದು" ಎಚ್ಚರಿಸಿದಳು ಅಂಪು. ಅವಳ್ಯಾವಾಗಲೂ ಹಾಗೆಯೆ. ಗುರುಹಿರಿಯರ ಮಾತನ್ನು ತಲೆಬಾಗಿ ನಡೆಸುವವಳು. ಬಡವರಿಗೆ ಸಹಾಯ ಮಾಡಬೇಕು ಎಂದು ಅವರ ಮೇಷ್ಟರು ಒಮ್ಮೆ ಬುದ್ಧಿ ಹೇಳಿದ್ದರು. ಅದಕ್ಕೆ ಅನುಸಾರವಾಗಿ ಅಂಪು ಶಾಲೆಯ ಸ್ಪರ್ಧೆಗಳಲ್ಲಿ ತನಗೆ ಬಹುಮಾನವಾಗಿ ಬಂದ ಕಿರಿಗೆ, ರವಿಕೆ ಬಟ್ಟೆ, ಬಟ್ಟಲುಗಳನ್ನು (ಅವರ ಮೇಷ್ಟರುಗಳು ಮುಂದಾಲೋಚನೆಯಿಂದ ಕೊಟ್ಟ ಬಹುಮಾನ) ಅಲ್ಲೇ ಬಡ ಹುಡುಗರಿಗೆ ಹಂಚಿಬಂದಿದ್ದಳು. ಇದರಿಂದ ಅಜ್ಜ ಅಜ್ಜಿಯರ ವಿಶೇಷವಾದ ಮೆಚ್ಚುಗೆಗೆ ಪಾತ್ರಳಾಗಿದ್ದಳು.

"ಇದೇನು ಕಾಕಪ್ಪ, ಆಗೊಂದು ಕೋಟೆಯ ಗೋಡೆ ಸಿಕ್ಕಿತ್ತು. ಈಗ ಇನ್ನೂ ಒಂದು ಸಿಕ್ಕಿತು." ಮಂಜು ಕಾಕಪ್ಪನ ಕೈಯಿಡಿದೆಳೆಯುತ್ತಾ ನಿಂತ.

"ಹೌದಪ್ಪೋ ರಾಯ! ಇದು ಏಳು ಸುತ್ತಿನ ಕೋಟೆ. ಇತ್ತಲಾಗಿ ಬನ್ನಿ. ಇಲ್ಲಿ ಓಬವ್ವನ ಕಿಂಡಿ ಇದೆ" ಎನ್ನುತ್ತ ಮುಖ್ಯವಾದ ಹಾದಿಯನ್ನು ಬಿಟ್ಟು ಕಾಲ್ದಾರಿಯನ್ನು ಹಿಡಿದರು ಕಾಕಪ್ಪ.

ಓಬವ್ವನ ಕಿಂಡಿಯನ್ನು ನೋಡಿ ಹುಡುಗರು ಪಕಪಕ ನಕ್ಕುಬಿಟ್ಟರು. "ಇದೆಂಥ ಕಿಂಡಿ? ಒಬ್ಬ ಮನುಷ್ಯ ಬಗ್ಗಿ ನಡೆದುಕೊಂಡೇ ನುಸಿಯಬಹುದು!" ಕಾಂತ ಸಂಶಯ ಪಟ್ಟ.

"ನಿಮ್ಮಂಥ ತುಂಟರು ನಾ ನುಸಿಯುತ್ತೇನೆ, ತಾ ನುಸಿಯುತ್ತೇನೆ ಅಂತ ಕಿಂಡಿಯನ್ನೇ ದೊಡ್ಡದು ಮಾಡಿದ್ದಾರೆ" ಎಂದರು ಕಾಕಪ್ಪ.

"ಓಹೋ ಹಾಗಾದರೆ ಎಲ್ಲ ಒಬ್ಬೊಬ್ಬರಾಗಿ ನುಸಕೊಂಡುಬನ್ನಿ. ನಾನು ಓಬವ್ವೆಯಾಗ್ತೀನಿ" ಎನ್ನುತ್ತ ಶಕ್ಕು ಕಿಂಡಿಯ ಪಕ್ಕದಲ್ಲಿ ನಗುತ್ತ ನಿಂತಳು.

"ಆಹಾ! ಎಲ್ಲರನ್ನೂ ಗುದ್ದೋಕೆ ಒಂದು ಅವಕಾಶ ಸಿಕ್ಕಿತು" ಯಶೋದ ಅವಳ ಗುಟ್ಟನ್ನು ಬಯಲಿಗೆಳೆದಳು.

ಕಿಂಡಿಯೊಳಗೆ ನುಸಿದು ದುರ್ಗದ ಕೋಟೆಯ ಹೊರ ಮೈಯನ್ನು ನೋಡುತ್ತ ಕಾಂತ ಅಚ್ಚರಿಗೊಂಡ. "ಅಬ್ಬಾ ಎಷ್ಟು ಕಡಿದಾದ ಗುಡ್ಡ! ಆ ಮೊಸರಿನವಳು ಹೇಗಾದರೂ ಗೂಡೆ ಹೊತ್ತುಕೊಂಡು ಇದನ್ನು ಏರಿರಬಹುದು? ಹಿಂದಿನ ಕಾಲದ ಸೈನಿಕರು ಎಂತಹ ಗಟ್ಟಿಗರು. ಅವರ ಶೌರ್ಯ ಎಷ್ಟಿರಬಹುದು? ಈಗಲಾದರೆ ಮೇಲಿಂದ ವಿಮಾನದಲ್ಲಿ ಬೆಚ್ಚಗೆ ಕುಳಿತು ಬಾಂಬು ಹಾಕಿ ಎದ್ದುಬಿಡಬಹುದು..." ಎಂದು ಕಲ್ಪಿಸಿಕೊಳ್ಳುತ್ತ ನಿಂತ.

"ನಾನು ಓಬವ್ವೆಯ ಗಂಡ. ತುತ್ತೂರಿ ಊದುತ್ತೇನೆ" ಎಂದ ಖಿಲಾಡಿ ಮಂಜು.

"ನಡಿಯೋ ತಿಮ್ಮಣ್ಣ" ಎಂದು ಮಂಜನ ತಲೆಯ ಮೇಲೆ ಯಶೋದ ತಬಲ ಬಾರಿಸಿದಳು.

"ನೋಡು ಕಾಕಪ್ಪ, ನನ್ನ ತಿಮ್ಮಣ್ಣ ಅಂತಾಳೆ" ಎಂದು ಮಂಜು ಅಳುಮುಖ ಮಾಡಿಕೊಂಡ.

"ತಿಮ್ಮಣ್ಣ ಅಂದರೆ ಅಳತಾರೆಯೇ? ನಮ್ಮ ದುರ್ಗದ ತಿಮ್ಮಣ್ಣ ನಾಯಕ ಮಹಾ ಶೂರ. ಅವನಿಟ್ಟ ಗುರಿ ತಪ್ಪುತ್ತಿರಲಿಲ್ಲ. ಬಹಳ ಧೈರ್ಯ ಅವನಿಗೆ. ಒಂದು ಸಲ ಏನಾಯಿತು ಅಂತೀರಿ... ವಿಜಯನಗರದ ಸೈನ್ಯ ದುರ್ಗಕ್ಕೆ ಮುತ್ತಿಗೆ ಹಾಕಿತ್ತು. ಆದರೆ ಸೇನಾಧಿಪತಿ ಸಾಳುವ ನರಸಿಂಗರಾಯ ಬಯಲಿನಲ್ಲಿ ಅಷ್ಟಗಲಕ್ಕೂ ಡೇರೆಗಳನ್ನು

ಹೊಡೆದುಕೊಂಡು ಸೈನ್ಯ ಜಮಾಯಿಸಿ ತಿಂಗಳುಗಟ್ಟಲೆ ಕಾದಿದ್ದ. ತಿಮ್ಮಣ್ಣ ನಾಯಕನಿಗೇನು ಚಿಂತೆ? ದುರ್ಗದೊಳಗೆ ನೀರಿದೆ, ವರ್ಷಕ್ಕಾಗುವಷ್ಟು ದವಸವಿದೆ. ಕೋಟೆಯ ಬಾಗಿಲು ಹಾಕಿಕೊಂಡು ನಿಸೂರಾಗಿದ್ದ. ಶತ್ರುಗಳು ತಗ್ಗಿನಲ್ಲಿದ್ದಾರೆ. ಎತ್ತರದಿಂದ ನಮ್ಮ ದುರ್ಗದ ಶೂರರು ಅವರನ್ನು ತಪತಪ ಉದುರಿಸ್ತ ಇದ್ದಾರೆ. ಕೆಳಗೆ ನರಸಿಂಗ ರಾಯನೂ ಏನೇನೋ ತಂತ್ರಗಳನ್ನು ಹೂಡಿಕೊಂಡು ಕಾಯುತ್ತಿದ್ದ. ಇತ್ತಲಾಗಿ ತಿಮ್ಮಣ್ಣ ನಾಯಕನ ಚಿಂತೆಯೇ ಬೇರೆ."

"ಹೋಗು ಕಾಕಪ್ಪ, ಕೋಟೆ ಬಾಗಿಲು ಹಾಕ್ಕೊಂಡು ಕೂತ್ಕೊಳ್ಳೋದೊಂದು ದೊಡ್ಡ ಶೌರ್ಯವೇನೋ". ಕಾಂತ ಅಕ್ಷೇಪಿಸಿದ.

"ಪೂರ್ತಿ ಕಥೆ ಕೇಳಿ ಆಮೇಲೆ ತೀರ್ಮಾನಿಸಿದ. ಆ ಸೇನಾಪತಿಯ ಹತ್ತಿರ ಒಂದು ಸೊಗಸಾದ ಕುದುರೆಯಿತ್ತು. ಬಹಳ ಆಸೆಯಿಂದ ಸಾಕಿಕೊಂಡು ತಮ್ಮ ಡೇರೆಯ ಪಕ್ಕದಲ್ಲೇ ಜಾಗಮಾಡಿ ಕಟ್ಟಿಸಿರುತ್ತಿದ್ದ. ಇದನ್ನೆಲ್ಲ ಕೋಟೆಯ ಗೋಡೆಯ ಮೇಲಿಂದಲೇ ನೋಡಿಕೊಂಡಿದ್ದ ನಾಯಕನಿಗೆ ಆ ಕುದುರೆಯನ್ನೂ ಹೇಗಾದರು ಮಾಡಿ ತರಬೇಕೆಂದು ಮನಸ್ಸಾಯಿತು. ಒಂದಿರುಳು ವೇಷ ಮರೆಸಿಕೊಂಡು ಏಕಾಂಗಿಯಾಗಿ ದುರ್ಗ ಇಳಿದು ಬಂದು ಶತ್ರು ಪಾಳೆಯವನ್ನು ಹೊಕ್ಕ."

"ಅಬ್ಬ! ಏನು ಯಮ ಧೈರ್ಯ" ರವಿ ರೋಮಾಂಚಿತನಾದ.

"ಯುದ್ಧದ ಸುದ್ದಿ ಇಲ್ಲವಾಗಿ ಶತ್ರು ಪಾಳೆಯವೆಲ್ಲ ಒಂದೇ ಗೊರಕೆ ಹುಯ್ಯುತ್ತಿದೆ. ನಾಯಕ ಮೆಲ್ಲನೆ ಕುದುರೆಯ ಲಾಯ ಹೊಕ್ಕು ಅದನ್ನು ಬಿಚ್ಚಿದ. ಹೊಸಬನ ವಾಸನೆ ಹಿಡಿದು ಕುದುರೆ ಕೆನೆದುಬಿಟ್ಟಿತು. ನಾಯಕ ತಕ್ಷಣವೇ ಅಲ್ಲಿದ್ದ ಹುಲ್ಲನ್ನು ಮೈಮೇಲೆ ಕವಿದುಕೊಂಡು ಮಲಗಿದ."

"ವಾಹ್! ಎಂಥ ಉಪಾಯ" ಮೆಚ್ಚಿಕೊಂಡ ಮಂಜು. ನರಸಜ್ಜಿ ಕಡ್ಡಿ ತೆಗೆದುಕೊಂಡು ಹೆದರಿಸಲು ಬಂದಾಗ, ಎಮ್ಮೆಗಾಗಿ ತೆಗೆದಿಟ್ಟಿರುವ ಒಣಹುಲ್ಲಿನಲ್ಲಿ ನಾನೂ ಇನ್ಮೇಲೆ ಮುಚ್ಚಿಟ್ಟುಕೊಂಡು ಬಿಡ್ತೇನೆ ಎಂದು ಯೋಚಿಸಿಕೊಂಡ. ಪದ್ದುವಿಗೆ ಬಹಳ ನಗು ಬಂದುಬಿಟ್ಟಿತು.

"ಆ ವೇಳೆಗೆ ಲಾಯದ ಕಾಸ್ತಾರ ಬಂದು ಯಾಕೋ ಕುದುರೆ ಬಿಚ್ಚಿಕೊಂಡಿದೆ ಅಂತ ಭಾವಿಸಿ, ಬೇರೆ ಒಂದು ಕಡೆ ಗೂಟ ಬಡಿದು ಕುದುರೆಯನ್ನು ಕಟ್ಟಿಹಾಕಿ ಹೋಗಿ ಮಲಗಿಬಿಟ್ಟ. ಆದರೆ ಅವನು ಗೂಟ ಮೆಟ್ಟಿದಾಗ ಅದರಡಿಯಲ್ಲಿ ತಿಮ್ಮಣ್ಣ ನಾಯಕನ ಬಲ ಅಂಗೈ ಇತ್ತು. ಕಮ ಕಿಮ ಅನ್ನದೆ ಮಲಗಿದ್ದ. ಅಂತಹ ಧೀರ ಅವನು!"

ಅಣ್ಣಾ ಮುಂದುವರೆಸಿದರು, "ಎಲ್ಲ ಸದ್ದಡಗಿದ ಮೇಲೆ ತಿಮ್ಮಣ್ಣ ನಾಯಕ ತನ್ನಖಡ್ಗದಿಂದ ಬಲಗೈಯನ್ನು ಕತ್ತರಿಸಿ ಹಾಕಿ, ಎಡಗೈಯಿಂದ ಕುದುರೆಯನ್ನು ಬಿಚ್ಚಿ ನಡೆಸುತ್ತ ಸ್ವಲ್ಪ ದೂರ ಹೋದ ಮೇಲೆ ಅದನ್ನೇರಿ ನಾಗಾಲೋಟದಲ್ಲಿ ದುರ್ಗದ ಕೋಟೆ ಸೇರಿಬಿಟ್ಟ."

"ಛೆ, ಎಂತಹ ಕೆಲಸವಾಯಿತು" ಅಂಪುವಿನ ಮನ ಮರುಗಿತು.

"ಇತ್ತಲಾಗಿ ಬೆಳಗೆದ್ದು ನೋಡಿದರೆ ಲಾಯದಲ್ಲಿ ಕುದುರೆಯಿಲ್ಲ. ಹರಡಿದ ಹುಲ್ಲಿ ನಡಿಯಲ್ಲಿ ರಾಜಲಕ್ಷಣ ಇರುವ ರತ್ನಕಂಕಣ ಹಾಕಿದ ಕೈಯೊಂದು ಗೂಟದಡಿಯಲ್ಲಿ ಕತ್ತರಿಸಿ ಬಿದ್ದಿದೆ! ಇದು ಚಿತ್ರದುರ್ಗದ ಅರಸರ ಕೆಲಸ ಎನ್ನುವುದು ಅವನಿಗೆ ತಿಳಿದುಹೋಯಿತು. ಇನ್ನೇನು ಒಂದು ಕೈ ಕಳಕೊಂಡಿದ್ದಾನೆ. ಅವನನ್ನು ಗೆಲ್ಲುವುದು ಸುಲಭ ಎಂದುಕೊಂಡ. ಆದರೆ ಮಾರನೆಯ ದಿನ ಅವನು ಆನೆಯ ಮೇಲೆ ಕುಳಿತು ತನ್ನ ಸೈನ್ಯವನ್ನು ತನಿಖೆ ಮಾಡುತ್ತಿದ್ದಾಗ ದುರ್ಗದ ಕೋಟೆಯ ಮೇಲಿನಿಂದ ಸುಯ್ಯೆಂದು ಒಂದು ಬಾಣ ಬಂದು ಅವನು ಸವಾರಿ ಮಾಡುತ್ತಿದ್ದ ಆನೆಯ ಬಲಗಣ್ಣಿಗೆ ತಾಗಿತು. ದುರ್ಗದ ಬತೇರಿಯ ಮೇಲೆ ತಿಮ್ಮಣ್ಣನಾಯಕ ಕಾಲಿನ ಸಹಾಯದಿಂದ ಬಿಲ್ಲು ನಿಲ್ಲಿಸಿಕೊಂಡು ಮೊಂಡು ಕೈಯ ಆಸರೆಯಿಂದ, ಎಡಗೈಯಿಂದಲೇ ಬಾಣ ಚಲಾಯಿಸಿದ್ದ. ಇದನ್ನು ಕಂಡು ನರಸಿಂಗರಾಯ ತಿಮ್ಮಣ್ಣನಾಯಕನಂತಹ ಶೂರನನ್ನು ನಾನೆಲ್ಲಿ ಗೆಲ್ಲುವುದಕ್ಕಾಗುತ್ತದೆ ಎಂದುಕೊಂಡು ಪಾಳೆಯ ಎಬ್ಬಿಸಿ ಹೊರಟುಬಿಟ್ಟ."

ಮಂತ್ರಮುಗ್ಧರಂತೆ ಮಕ್ಕಳು ಆ ಸಾಹಸದ ಕಥೆಯನ್ನು ಕೇಳಿದರು. "ಆದರೂ ಕೈಕತ್ತರಿಸಿಕೋಬಾರದಾಗಿತ್ತು" ಎಂದಳು ಯಶೋದ.

"ಹಾಗೇನೆ ಕಣೇ ಶೂರರು! ಮೀನಮೇಷ ಎಣಿಸ್ತಾ ಗೂಟ ಕೀಳ್ತಾ ಕೂತಿದ್ದರೆ ಆ ಕಾಸ್ತಾರನ ಕೈಗೆ ಸಿಗಬೇಕಾಗುತ್ತೆ" ಎಂದು ಕಾಂತ ಹೇಳಿದ.

"ನನಗೆ ಬಾಯಾರಿಕೆ, ನನಗೆ ನೀರಡಿಕೆ" ಎಂದು ಪದ್ದು, ಮಂಜು ಶುರುಮಾಡಿದರು.

"ಈ ಹರಿಯೋ ನೀರಿನ ಮೂಲ ಆ ಬಂಡೆಗಳ ಮಧ್ಯ ಇದೆ. ಅದೇ ತಣ್ಣೀರುದೋಣಿ. ಅದರಲ್ಲೊಂದು ತಮಾಷೆ ತೋರಿಸ್ತೇನೆ ನಡೀರಿ" ಎನ್ನುತ್ತಾ ನಾರಣ್ಣಾ ನೀರು ಕುಡಿಯುತ್ತ, ಆ ನೀರಿನಲ್ಲಿ ಕಾಲಿಟ್ಟು ಪಚಪಚ ಎಂದದನ್ನು ಹಾರಿಸುತ್ತ ನಗುತ್ತಿದ್ದ ಚುಳ್ಳಾರಿಗಳನ್ನು (ಪದ್ದು, ಮಂಜು, ಅನಂತ) ಹೊರಡಿಸಿಕೊಂಡು ಹೊರಟರು. ಅವರು ತೋರಿಸುವುದಕ್ಕಿಂತ ಮೊದಲೇ ರವಿ, ಲೀಲ, ಕಾಂತ, ಶಕ್ಕು ಎಲ್ಲ ಸೇರಿ ಪೈಪೋಟಿಯಿಂದ ನೀರಿನ ಜಾಡನ್ನು ಹಿಡಿದು ನಡೆಯುತ್ತಾ ಆ ಬಂಡೆಗಳ ನಡುವಿನ ದೋಣಿಗೆ ಕರೆದೊಯ್ದರು. ಕಲ್ಲುಬಂಡೆಗಳಿಂದ ಕೂಡಿದ, ನೆರಳು ಹಾಸುವ ಕಮಾನೊಂದನ್ನು ಪ್ರಕೃತಿಯೆ ಅಲ್ಲಿ ಸೃಷ್ಟಿಸಿತ್ತು. ಹತ್ತಿಪತ್ತು ಜನ ಸಹಜವಾಗಿಯೇ ಅಲ್ಲಿ ಕುಳಿತು ದಣಿವಾರಿಸಿ

ಕೊಳ್ಳಬಹುದು. ಗುಡ್ಡದ ಅಂತರಾಳದಿಂದ ಸಣ್ಣಗೆ ಜುಳು ಜುಳು ಎನ್ನುತ್ತ ನೀರು ಹರಿದುಬಂದು ಕಮಾನಿನಡಿಯಲ್ಲಿ ಒಂದು ಮೊಳ ಆಳ, ಒಂದು ಮೊಳ ಸುತ್ತಳತೆ ಇರುವ, ಕಲ್ಲಿನ ತಗ್ಗಿನಲ್ಲಿ ತುಂಬಿಕೊಂಡು ಮುಂದಕ್ಕೆ ಹರಿಯುತ್ತಿತ್ತು. ಹುಡುಗರೆಲ್ಲ ನಾನು ತಾನೆಂದು ನೀರು ಕುಡಿದರು.

"ಗುಡ್ಡದ ಮೇಲಿರುವ ಗೋಪಾಲಸ್ವಾಮಿ ಹೊಂಡದಿಂದ ನೀರು ಈ ಮಾರ್ಗವಾಗಿ ಹರಿದು, ಕೆಳಗೆ ಬರಿಗೇರಮ್ಮನ ಹೊಂಡ ಸೇರುತ್ತದೆ. ಎಂತೆಂತಹ ಬೇಸಿಗೆಯಲ್ಲೂ ಇಲ್ಲಿ ನೀರು ಇದ್ದೇ ಇರುತ್ತದೆ. ಈಗ ನೀವು ತಗ್ಗಿನಲ್ಲಿರುವ ನೀರನ್ನೆಲ್ಲ ಹೊರಕ್ಕೆ ಎರಚಿ ಖಾಲಿ ಮಾಡ್ರಿ, ಇನ್ನೊಂದು ಹತ್ತು ನಿಮಿಷಕ್ಕೆ ತಗ್ಗು ಪುನಃ ತುಂಬಿಕೊಳ್ತದೆ" ಎಂದರು ನಾರಣಣ್ಣ.

ಹುಡುಗರು ಪೈಪೋಟಿಯಿಂದ ಎಲ್ಲ ನೀರನ್ನು ಎರಚಿ ಖಾಲಿಮಾಡಿ ಬಿಟ್ಟರು. ತೋಟದಿಂದ ತಂದಿದ್ದ ದೋರಸೀಬೆಯ ಹಣ್ಣುಗಳನ್ನು ತಿನ್ನುತ್ತಾ ಕಾದು ಕುಳಿತರು. ತಣ್ಣಗಿನ ಶುಭ್ರವಾದ ನೀರು ಸದ್ದಿಲ್ಲದೆ ಬಂದು ತುಂಬಿಕೊಂಡಿತು.

"ಈಗ ಕುಡೀರಪ್ಪ ಹೊಸಾನೀರು. ಒಳ್ಳೇ ರುಚಿಯಾಗಿರುತ್ತೆ" ಎಂದು ಅಣ್ಣ ಎಲ್ಲರೊಡನೆ ತಾವೂ ಒಂದೆರಡು ಬೊಗಸೆ ಕುಡಿದು ಮುಂದೆ ಹೊರಟರು. ಹುಡುಗರೆಲ್ಲ ಹಿಂಬಾಲಿಸುವವರೆ. ಆದರೆ ತಿಂಡಿಯ ಬುಟ್ಟಿ ಹೊತ್ತು ಕಾಂತನಿಗೆ ಸಾಕಾಗಿತ್ತು. ಯಶೋದ, ಶಕ್ಕು ಇಬ್ಬರು ಹೊರಲೆಂದು ಅದನ್ನು ಬಿಟ್ಟು ಓಡಿಬಿಟ್ಟ.

"ನಾನೇನು ಹೊರಲ್ಲ. ಅದಲ್ಲೇ ಇರಲಿ" ಎಂದು ಯಶೋದ ಮುನಿದಳು.

"ಹಸಿವಾದಾಗ ಏನು ಮಾಡೋದು? ಹೋಗಲಿ ಬಾ ಇಬ್ಬರೂ ಸೇರಿ ಹಿಡಿದು ಕೊಂಡು ಹೋಗೋಣ" ಎಂದು ಶಕ್ಕು ಮನ ಒಲಿಸಿದಳು.

ಇಬ್ಬರೂ ಏದುತ್ತ ತಿಂಡಿಯ ಬುಟ್ಟಿ ಹೊರುವುದನ್ನು ನೋಡಿ ಅಣ್ಣ ನಸುನಗುತ್ತ ನಿಂತರು. ಅವರಿಬ್ಬರೂ ಸಮೀಪ ಬಂದಮೇಲೆ ಬುಟ್ಟಿ ಕೊಡ್ರಿ ಒಂದು ಮಜ ತೋರಿಸೋಣ ಎನ್ನುತ್ತ ಅದನ್ನು ಹೆಗಲಮೇಲೆ ಏರಿಸಿಕೊಂಡರು.

"ಹಿಂದೆ ಇಲ್ಲೆಲ್ಲ ನಾಯಕರನ್ನೋ, ಅವರ ರಾಣಿಯರನ್ನೋ ಪಲ್ಲಕ್ಕಿಯಲ್ಲಿ ಕೂರಿಸಿ ಕೊಂಡು ನಾಲ್ಕು ನಾಲ್ಕು ಜನ ಬೋಯಿಗಳು ಹೆಗಲಮೇಲೆ ಹೊರುತ್ತಾ, ಗುಡ್ಡ ಏರುವುದೊ ಇಳಿಯುವುದೋ ಮಾಡುತ್ತಿದ್ದರು. ರಾಜರೂ ರಾಣಿಯರೂ ಬಹಳ ಭಾರ ಗೊತ್ತೇನ್ರೊ. ದಿನಾ ರೊಟ್ಟಿ ಬೆಣ್ಣೆ ತಿಂದು ಒಳ್ಳೆ ಕಟ್ಟುಮಸ್ತಾಗಿರುತ್ತಿದ್ದರು. ಪಲ್ಲಕ್ಕೀಲಿ ಹೊರುವಾಗ ಕಾಲಿಗೆ ಮುಳ್ಳು ಚುಚ್ಚಿದರೆ ತೆಕ್ಕೊಳ್ಳೋ ಹಾಗಿಲ್ಲ. 'ನೆಗ್ಗಿಲುಮುಳ್ಳು ಐಸ್ಸಾ, ಬೊಬ್ಬಳಿಮುಳ್ಳು ಐಸ್ಸಾ' ಅಂತ ಹೇಳಿಕೊಂಡು ಹಾಗೇಹೋಗಬೇಕು" ಎಂದು

ಪಲ್ಲಕ್ಕಿ ಹೊರುವವರಂತೆ ಅಭಿನಯಿಸುತ್ತ ಅವರು 'ನೆಗ್ಗಲುಮುಳ್ಳು ಐಸ್ಸಾ, ಬೊಬ್ಬಳಿ ಮುಳ್ಳು ಐಸ್ಸಾ' ಎಂದು ಮೆಟ್ಟಲೇರತೊಡಗಿದರು.

"ಆಹಾ ಆಗಿನ ಕಾಲದಲ್ಲಿ ಮೆಟ್ಟು ಇರಲಿಲ್ಲೇನೋ" ಎಂದು ಕಾಂತ ಸಂಶಯಪಟ್ಟ.

"ಇತ್ತು ಇತ್ತು. ಆದರೆ ಬೋಯಿಗಳ ಹತ್ತಿರ ಇರಲಿಲ್ಲ."

"ಅಣ್ಣಾ ನಾನೂ ಹಾಗೇ ಮಾಡ್ತೀನಿ. ನನ್ನ ಕೈಯಲ್ಲಿ ಕೊಡ್ಡರಣ್ಣಾ, ನನ್ನ ಕೈಯಲ್ಲಿ ಕೊಡ್ರಣ್ಣಾ" ಎಂದು ಎಲ್ಲರೂ ಗಲಾಟೆ ಮಾಡಿದರು. ಈಗ ಬುಟ್ಟಿ ಹೊರಲು ನೂಕುನುಗ್ಗಲಾಯಿತು.

"ಒಬ್ಬರಾದಮೇಲೊಬ್ಬರಿಗೆ" ಎನ್ನುತ್ತ ಅಷ್ಟಿಷ್ಟು ದೂರಕ್ಕೆ ಅಣ್ಣಾ ಅದನ್ನೆತ್ತಿ ರವಿ, ಅನಂತು, ಮಂಜು, ಕಾಂತ, ಲೀಲ, ಶಕ್ಕು, ಯಶೋದ ಎಲ್ಲರ ಹೆಗಲಮೇಲೆ ಇಟ್ಟರು. ಅವರು ನೆಗ್ಗಲು ಮುಳ್ಳು ಐಸ್ಸಾ, ಬೊಬ್ಬಳಿಮುಳ್ಳು ಐಸ್ಸಾ ಎಂದು ಕೂಗುತ್ತ ಅಕ್ಕತಂಗಿಯರ ಹೊಂಡದವರೆಗೂ ಬಂದುಬಿಟ್ಟರು. ಬೆಲ್ಲದಚ್ಚಿನ ಹಾಗೆ ಚೊಕ್ಕವಾಗಿ ಮೆಟ್ಟಲು ಕಟ್ಟಿ ನಿರ್ಮಿಸಿದ್ದ ಎರಡು ಕಲ್ಯಾಣಿಗಳು ಅಕ್ಕಪಕ್ಕದಲ್ಲಿದ್ದು, ಮಧ್ಯೆ ಅದರ ದಿಂಡಿನಮೇಲೆ ದಾರಿ ಇದ್ದಿತು. ಅಲ್ಲಿಂದ ಹಾಯ್ದರೆ ಗೋಪಾಲಸ್ವಾಮಿಯ ದೇವಸ್ಥಾನ ಮತ್ತು ಹೊಂಡ.

"ಇದನ್ನು ಅಕ್ಕ ತಂಗಿಯರು ಕಟ್ಟಿಸಿದರು. ಅದಕ್ಕೆ ಹೀಗೆ ಹೆಸರು" ಎಂದಳು ಮಿತಭಾಷಿಣಿ ಅಂಪು.

" ಒಂದು ದೊಡ್ಡದು, ಒಂದು ಚಿಕ್ಕದು. ಆದ್ದರಿಂದಲೂ ಅಕ್ಕತಂಗಿ ಎನ್ನಬಹುದು" ಎಂದು ಯಶೋದ ವ್ಯಾಖ್ಯಾನ ಮಾಡಿದಳು.

ಅಲ್ಲಿಂದ ಮುಂದೆ ಸ್ವಲ್ಪ ದೂರಕ್ಕೆ ಗೋಪಾಲಸ್ವಾಮಿಯ ದೇವಾಲಯ. ಅದರ ಪಕ್ಕಕ್ಕೆ ವಿಸ್ತಾರವಾಗಿ ಹರಡಿಕೊಂಡ ಗೋಪಾಲಸ್ವಾಮಿಯ ಹೊಂಡ ಕಾಣಿಸಿತು. ಬೇಸಿಗೆಯಾದರೂ ಅದರಲ್ಲಿ ನೀರು ತುಂಬಿತ್ತು. ನೀರಿನ ಮೊರೆತವನ್ನೂ ಹೆಚ್ಚಳವನ್ನೂ ನೋಡಿಯೇ ಅದರ ಆಳವನ್ನು ಊಹಿಸಬಹುದಾಗಿತ್ತು. ನೂರಾರು ಜನ ಅಲ್ಲಿ ಬಟ್ಟೆ ಒಗೆದುಕೊಳ್ಳುವುದು, ಸ್ನಾನ ಮಾಡುವುದು ನಡೆಸಿದ್ದರು. ಹಲವಾರು ಜನ ಹುಡುಗರು ಈಜಾಡುತ್ತ, ಒಬ್ಬರನ್ನೊಬ್ಬರು ಛೇಡಿಸುತ್ತ ನಲಿಯುತ್ತಿದ್ದರು. ತಲೆಯೆತ್ತಿ ನೋಡಿದರೆ ಸುತ್ತಲೂ ಅಂತರಿಕ್ಷವನ್ನು ಚುಂಬಿಸುವ ಹೆಬ್ಬಂಡೆಗಳನ್ನು ಹೊತ್ತ ಬೆಟ್ಟಗಳ ಸಾಲು, ಅದರ ಮೇಲೆ ಹೆಬ್ಬಾವಿನಂತೆ ಹರಿದ ಕೋಟೆಯ ಗೋಡೆ, ಉದ್ದಕ್ಕೂ ಅಲ್ಲಲ್ಲಿ ಬತೇರಿ.

ಸುತ್ತ ನೋಡುತ್ತ ಮಯ್ಮರೆತು ನಿಂತ ಕಾಕಪ್ಪನನ್ನು ಕಾಂತನ ಧ್ವನಿ ಎಚ್ಚರಿಸಿತು.
"ತಿಂಡಿ ತಿನ್ನೋಣ ಕಾಕಾ, ಪದ್ದು ಅನಂತು ಅವರಿಗೆಲ್ಲ ಹಸಿವಾಗಿರಬಹುದು."

"ನಿನಗಾಗಿಲ್ಲೇನೋ" ಎನ್ನುತ್ತ ಕಾಕಪ್ಪ ಎಲ್ಲರಿಗೂ ಹೊಂಡದಲ್ಲಿ ಕೈಕಾಲುಮುಖ ತೊಳೆಯ ಹೇಳಿದರು. ಗೋಪಾಲಸ್ವಾಮಿಯ ದೇವಸ್ಥಾನ ಮುಚ್ಚಿದ್ದರಿಂದ ಅದಕ್ಕೆ ಹೊರಗಿನಿಂದಲೆ ಪ್ರದಕ್ಷಿಣೆ ನಮಸ್ಕಾರಗಳಾದುವು.

"ಓಹೋಹೋ ಪೂಜಾರಿಗಳಿಗೆ ಪುರುಸತ್ತಿಲ್ಲದಿದ್ದರೆ ದೇವರಿಗೇ ಬೀಗಮುದ್ರೆ" ಎಂದುಕೊಳ್ಳುತ್ತ ಶಕ್ಕು ದೇವಾಲಯದ ಕೈಸಾಲೆಯನ್ನಿಳಿದಳು.

"ದೇವರಿಗೆಂತ ಬೀಗಮುದ್ರೆ? ದೇವಾಲಯಕ್ಕೆ ಬೀಗಮುದ್ರೆ" ಎಂದು ಅಣ್ಣ ತಿದ್ದಿದರು. ಆಲಯದ ಪಕ್ಕದಲ್ಲಿ ನೆರಳಿತ್ತು. ಶುಭ್ರವಾದ ಗರಿಕೆ ಬೆಳೆದ ನೆಲವಿತ್ತು. ಅಲ್ಲಿ ಮಕ್ಕಳೆಲ್ಲ ಸುತ್ತುಗಟ್ಟಿ ಕುಳಿತರು. ಹದಿನಾಲ್ಕು ವರುಷ ಇನ್ನೂ ತುಂಬದ ಎತ್ತರವಾಗಿದ್ದ ಅಂಪು ತಿಂಡಿ ಹಂಚುವ ಕೆಲಸಕ್ಕೆ ತಾನಾಗಿ ಮುಂದಾದಳು. ನಾರಣ ಣ್ಣನಿಗೆ ತಮ್ಮ ಬಾಲ್ಯದ ನೆನಪಾಗಿ ಸ್ಫೂರ್ತಿ ಉಂಟಾಯಿತು.

"ನಾವೆಲ್ಲ ಹುಡುಗರಾಗಿದ್ದಾಗ ನಮ್ಮ ಅಜ್ಜಿ (ಅಂದರೆ ನರಸಜ್ಜಿ)ಯ ಜೊತೆಯಲ್ಲಿ ಇಲ್ಲಿಗೆ ಬರುತಿದ್ವು. ಅವರು ಬಟ್ಟೆ ಒಗೆದು ಹರವುತಿದ್ದರೆ, ನಾವೆಲ್ಲ ದೊಡ್ಡ ಬತೇರಿ ಹತ್ತಿ 'ಅಜ್ಜೀ' ಅಂತ ಕೂಗ್ತಿದ್ದೆವು. ಅದು ಅವರಿಗೆ ಕೇಳಿಸಿ ತಲೆಯೆತ್ತಿ ನೋಡಿ, ಬಣ್ಣದ ಬಟ್ಟೆ ಅಲ್ಲಾಡಿಸಿ ಇಳೀರಿ ಅಂತ ಸನ್ನೆ ಮಾಡ್ತಿದ್ದರು."

"ಅಷ್ಟು ದೂರದಿಂದ ಕೇಳಿಸುತ್ತೆಯೆ?"

"ಹೌದು. ಯಾಕೇಂದ್ರೆ ಸುತ್ತ ಗುಡ್ಡಗಳಿರೋದರಿಂದ ದನಿ ಹಂಚಿಹೋಗದೆ ಈ ತಗ್ಗಿನ ಪ್ರದೇಶಕ್ಕೆ ಬಂದು ಕೇಳಿಸುತ್ತೆ."

"ಹಾಗಾದರೆ ಈಗ ಪರೀಕ್ಷೆ ಮಾಡೋಣ" ಎನ್ನುತ್ತ ಕಾಂತ, ರವಿ ಎದ್ದು ನಿಂತರು.

"ಈ ಸಲ ಬೇಡ. ಪದ್ದು, ಅನಂತ ಎಲ್ಲ ಚಿಕ್ಕವರು. ಮುಂದಿನ ವರ್ಷಕ್ಕೆ ಇವರೆಲ್ಲ ಬಹಳ ದೊಡ್ಡವರಾಗಿರ್ತಾರೆ. ಆಗ ನೋಡೋಣ" ಎನ್ನುತ್ತ ರವಿ, ಕಾಂತರ ಕಡೆಗೆ ತಿರುಗಿ ಅಣ್ಣ ಕಣ್ಣು ಸನ್ನೆ ಮಾಡಿದರು.

"ಹೌದೌದು ಅಷ್ಟೆತ್ತರ ಆಗಿರ್ತೇವಿ..." ಎನ್ನುತ್ತ ಮೇಲೆದ್ದು ಕೈ ಎತ್ತಿ ತೋರಿಸಿದ. ಈಗ ನಗುವುದಕ್ಕೆ ಹೆಣ್ಣುಮಕ್ಕಳ ಸರದಿಯಾಯಿತು.

"ಈ ಹೊಂಡ ಸಾಮಾನ್ಯದಲ್ಲ. ಮದಕರಿನಾಯ್ಕನ ಕಾಲವಾದ ಮೇಲೆ ಶತ್ರುಗಳು ದುರ್ಗವನ್ನು ಆಕ್ರಮಿಸಿಕೊಂಡರು. ಆಗ ನಾಯಕರ ಮನೆಯ ಹೆಂಗಸರು ತಮ್ಮ ಒಡವೆಗಳನ್ನೆಲ್ಲ ಕಟ್ಟಿಕೊಂಡು ಬಂದು ಇದರಲ್ಲಿ ಬಿದ್ದುಬಿಟ್ಟರು" ಎಂದರು ನಾರಣಣ್ಣ.

"ಆಹಾ! ಹಾಗಾದರೆ ಅದರ ತಳದಲ್ಲಿ ಎಂತೆಂತಹ ಒಡವೆ ಇರಬಹುದು" ಎಂದು ಲೀಲ ಕನಸು ಕಾಣತೊಡಗಿದಳು.

ಅವುಗಳನ್ನು ತೆಗೆಸೋದಿಕ್ಕೆ ಸರ್ಕಾರದವರು ಎಷ್ಟೋ ಪ್ರಯತ್ನಪಟ್ಟರು. ಆಗಲಿಲ್ಲ! ಕೊನೆಗೆ ನೀರೆತ್ತುವ ಮಿಷನ್ ತಂದು, ಒಂದು ದಿನವೆಲ್ಲ ನೀರು ತೆಗೆಸಿದ್ದಕ್ಕೆ ಹೊಂಡದ ನೀರಿನ ಮಟ್ಟ ಒಂದಂಗುಲ ಕಡಿಮೆ ಆಯಿತು. ಮಾರನೆಯ ದಿನ ನೋಡಿದರೆ ಅಷ್ಟೇ ನೀರು ಬಂದು ಸೇರಿಬಿಟ್ಟಿತ್ತು. ಆಗ ಇದು ಆಗುವ ಹೋಗುವ ಕೆಲಸವಲ್ಲ ಅಂತ ಅದನ್ನು ಕೈಬಿಟ್ಟರು."

"ಜನರು ಯಾರಾದರೂ ಮುಳುಗು ಹಾಕಿದಾಗ ಸಿಕ್ಕಿದರೆ?" ಶಕ್ಕು ವಿಚಾರಿಸಿದಳು.

"ಸಿಕ್ಕಿದರೆ ಅದನ್ನು ಇಟ್ಟುಕೋಬಾರದು. ದುರ್ಗದ ಪ್ಯಾಟೆಯ ಹತ್ತಿರ ಪ್ರಾಚೀನ ವಸ್ತುಸಂಗ್ರಹಾಲಯವಿದೆ. ಅದರ ಅಧಿಕಾರಿಗಳಿಗೆ ಒಪ್ಪಿಸಬೇಕು."

ಹುಡುಗರು ತಾವು ತಿಂದು ಸಾಕಾಗಿ ಉಳಿದ ರೊಟ್ಟಿಗಳನ್ನು ಚೂರು ಚೂರು ಮಾಡಿ ಕಾಗೆ ನಾಯಿಗಳಿಗೆ ತಿನ್ನಿಸತೊಡಗಿದರು. ಅವುಗಳ ಕಚ್ಚಾಟವನ್ನು ಕಂಡು ನಗುತ್ತಿದ್ದರು. ಅಂಪು ಉಳಿದ ತಿನಿಸನ್ನು ಅತ್ತಿತ್ತ ಓಡಾಡುವ ದನ ಕಾಯುವ ಹುಡುಗರಿಗೆ ಕೊಟ್ಟು, ಬುಟ್ಟಿಯಲ್ಲಿ ಬಾಳೇಹಣ್ಣು ಕೊಬ್ಬರಿಗಳು ಇದ್ದ ಕೈಚೀಲ, ಕುಂಕುಮದ ಪೊಟ್ಟಣ್ಣಾ ಇಟ್ಟು ಸಿದ್ಧವಾದಳು. ಎಲ್ಲ ನೋಡಿಕೊಂಡ ನಾರಣಣ್ಣಾ ಇನ್ನು ವಿಶ್ರಾಂತಿ ಸಾಕೆಂದು ಭಾವಿಸಿ ಎದ್ದರು. "ಎದ್ದೇಳ್ರಿ, ಈಗ ಸಂಪಿಗೆ ಸಿದ್ದೇಶ್ವರನ ಗುಡಿಗೆ ಹೋಗಬೇಕು" ಎಂದು ಎಲ್ಲರನ್ನೂ ಹೊರಡಿಸಿದರು.

ಮಕ್ಕಳೆಲ್ಲರ ಜೊತೆಗೆ ಕಾಕಪ್ಪ ಕೂಡ ಜೋರಾಗಿ ನಡೆಯುವ ಸ್ಪರ್ಧೆಗೆ ಸೇರಿದರು. ಎಲ್ಲ ನಗುತ್ತ, ಒಬ್ಬರನೊಬ್ಬರು ಅಣಕಿಸುತ್ತ, ಪೈಪೋಟಿಯಿಂದ ಸಾಗಿದರು. ಪದ್ದು, ಮಂಜು, ಅನಂತರಿಗೆ ಸೋಲುತ್ತೇವೆಂಬ ಭಯವುಂಟಾಯಿತು. ಅವರು ಇನ್ನೇನು ಗುಡಿ ಎದುರಿಗೆ ಕಾಣುತ್ತದೆ ಎನ್ನುವಾಗ ಕೇಕೆ ಹಾಕಿ ನಗುತ್ತ ಓಡಿಬಿಟ್ಟರು. ನಾವೇ ಮೊದಲು ನಾವೇ ಗೆದ್ದೆವು ಎಂದು ಕೂಗಾಡಿದರು. ಕಾಕಪ್ಪ ಮತ್ತು ಕಾಂತರ ಜೊತೆಜೊತೆಗೂ ನಡೆದು ಶಕ್ಕು ಮೊದಲಿಗರ ಗುಂಪಾದಳು. ಯಶೋದ, ಲೀಲ, ರವಿ ಎರಡನೆಯ ಗುಂಪಿಗೆ ಬಂದರು. ಓಟ ಹೂಡಿದ್ದರಿಂದ ಚುಲ್ಟಾರಿಗಳು ಲೆಕ್ಕಕ್ಕಿಲ್ಲವಾದರು. ಅಂಪು ಬುಟ್ಟಿ ಹೊತ್ತು ನಗುತ್ತ ಹಿಂಬಾಲಿಸಿ ಬಂದಳು.

"ಪರವಾಗಿಲ್ಲಪ್ಪೋ ಈ ಬಯಲು ಸೀಮೆ ಹುಡುಗಿ. ನಾನೇನೋ ಪ್ರಯೋಜನವಿಲ್ಲ ಇದು, ಬರೀ ತೆಳ್ಳಗೆ ಬೆಳ್ಳಗೆ ಅಂತಿದ್ದೆ" ಎಂದು ಕಾಕಪ್ಪ ತಮ್ಮ ಸೊಸೆಯ ಬೆನ್ನು ತಟ್ಟಿದರು.

"ಇನ್ನೇನು ಆ ಕೆಂಡಸಂಪಿಗೆ ಮರ ಕಾಣುತ್ತಲ್ಲ ಅದೇ ಸಂಪಿಗೆ ಸಿದ್ದೇಶ್ವರ" ಎನ್ನುತ್ತ ಅಣ್ಣಾ ಮೂರಡಿಯನ್ನು ಎತ್ತಿಕೊಂಡು ಏರುತ್ತ ದೇವಾಲಯದ ಮುಂಭಾಗಕ್ಕೆ ಬಂದರು.

ಸುತ್ತಣ ವಿಸ್ತಾರವಾದ ಪ್ರಾಕಾರವನ್ನೂ ಅಲ್ಲೇ ಒಂದು ಪಾರ್ಶ್ವಕ್ಕೆ ಬೆಳೆದು, ತನ್ನ

ಪ್ರಾಚೀನತೆಯನ್ನು ಸಾರುತ್ತ ದಶದಿಕ್ಕುಗಳಿಗೂ ತನ್ನ ಕೊಂಬೆಗಳನ್ನು ಚಾಚಿದ ಕೆಂಡ ಸಂಪಿಗೆಯ ಮರವನ್ನೂ ಕಾಣುತ್ತಲೇ ಹುಡುಗರ ಆಯಾಸ ಮಾಯವಾಯಿತು. ಗುಡ್ಡದ ಆ ಎತ್ತರದಲ್ಲಿ ಬೀಸುವ ತಂಗಾಳಿಗೆ ಮೈಯೊಡ್ಡಿ ಎಲ್ಲರೂ ತಲೆಯೆತ್ತಿ ಸಂಪಿಗೆಯ ಮರವನ್ನು ಕಂಡರು. ಸುವಾಸನೆ ಗಾಳಿಯಲ್ಲಿ ಆ ಮರಕ್ಕಿಂತ ವಿಸ್ತಾರವಾಗಿ ಸೂಕ್ಷ್ಮವಾಗಿ ವ್ಯಾಪಿಸಿಕೊಂಡಿತ್ತು. ಕೆಳಗೆಲ್ಲ ಸಂಪಿಗೆಯ ದಳಗಳು ಉದುರಿದ್ದುವು. ಅನತಿ ದೂರದಲ್ಲೊಂದು ಬಿಲ್ವವೃಕ್ಷವೂ ಇತ್ತು.

"ಈ ಮರವನ್ನು ಹೇಗಪ್ಪಾ ಹತ್ತೋದು?" ಮಂಜು ಚಿಂತಿಸತೊಡಗಿದ.

ದೇವಾಲಯದೊಳಹೊಕ್ಕು ಪೂಜೆ ನಮಸ್ಕಾರಗಳನ್ನು ಸಲ್ಲಿಸಿ ಪ್ರದಕ್ಷಿಣೆ ಹಾಕಿದ್ದಾಯಿತು. ಅಣ್ಣ ಗರ್ಭಗುಡಿಯ ಬಳಿಗೆ ಮಕ್ಕಳನ್ನು ಕರೆದೊಯ್ದು ಅದರ ಹೊರಗೋಡೆಯನ್ನೂ ತೋರಿಸಿ "ಒರಗಿ ನಿಂತುಕೊಳ್ಳಿ ನೋಡೋಣ" ಎಂದರು. ಒರಗಿ ನಿಂತ ಕೂಡಲೆ ಚಕ್ಕಳಗುಳಿ ಇಟ್ಟಂತಾಗಿ, ಬೆಚ್ಚಿದಂತಾಗಿ ಎಲ್ಲರೂ ಹಾರಿ ಬಿದ್ದರು. ತಣ್ಣಗ ಕೊರೆಯುವ ಕಲ್ಲಿನ ಗೋಡೆ ಹಿಮದ ಗಡ್ಡೆಯನ್ನು ಒರಗಿದಂತೆ ಭಾಸವಾಗುತ್ತಿತ್ತು.

"ಇದರ ಹಿಂದೆ ನೀರು ಹರಿಯುತ್ತಿರಬಹುದು" ಎಂದು ಯಶೋದ ಊಹಿಸಿದಳು.

"ಗರ್ಭಗುಡಿಯಲ್ಲಿ ದೇವರ ಹಿಂಭಾಗಕ್ಕೆ ಸುರಂಗಮಾರ್ಗವಿದೆ. ಅಂಕಲಿ ಗವಿಯಲ್ಲಿತ್ತಲ್ಲ ಹಾಗೆ."

"ದೇವಸ್ಥಾನಕ್ಕೆ ಯಾಕಣ್ಣ ಸುರಂಗ ಮಾರ್ಗ?" ಅಂಪು ಅಚ್ಚರಿಗೊಂಡಳು.

"ಹಿಂದಿನ ರಾಜರು ತಮ್ಮ ಅರಮನೆಗಳಿಂದ ದೇವಾಲಯಗಳಿಗೆ, ಮಠಗಳಿಗೆ, ಊರ ಹೊರಕ್ಕೆ ಎಲ್ಲ ಸುರಂಗ ಮಾರ್ಗ ಇಟ್ಟಿದ್ದರು. ಸಮಯ ಬಂದರೆ ರಕ್ಷಣೆಗೆ ಯುದ್ಧಕಾಲದಲ್ಲಿ ಸರಬರಾಜಿಗೆ ಬೇಕಲ್ಲ."

ಸೂರ್ಯ ನೆತ್ತಿಯ ಮೇಲಿಂದ ಪಶ್ಚಿಮದ ಕಡೆಗೆ ವಾಲಿದ್ದ. ಮಕ್ಕಳು ಆಯಾಸಗೊಂಡಿದ್ದರೂ ತಂಗಾಳಿಯಲ್ಲಿ ಉತ್ಸಾಹ ಕುಗ್ಗದೆ ಉಲ್ಲಸಿತರಾಗಿಯೇ ಇದ್ದರು.

"ಇನ್ನು ಎದುರಿಗೆ ಕಾಣುತ್ತಲ್ಲ ಆ ಮಾರ್ಗ ಹಿಡಿದರೆ ಏಕನಾಥೇಶ್ವರಿ ದೇವಸ್ಥಾನ ಸಿಗುತ್ತದೆ. ಆ ದೇವಾಲಯದಲ್ಲಿ ಹಿಡಿಂಬನ ಹಲ್ಲಿದೆ."

"ಹಿಡಿಂಬನ ಹಲ್ಲು?" ಕುತೂಹಲಗೊಂಡಳು ಶಕ್ಕು.

"ಹೌದವ್ವ, ನಮ್ಮ ದುರ್ಗದ ಸೀಮೆಗೆ ದ್ವಾಪರಯುಗದಲ್ಲಿ ಪಾಂಡವರು ಬಂದಿದ್ದರು. ನಮ್ಮೂರಿನ ಎದುರಿಗೆ ಜೋಳಗುಡ್ಡ ಇದೆಯಲ್ಲ ಅಲ್ಲಿ ಕುಂತಿ ಭೀಮನಿಗೆ ಅನ್ನ ಮಾಡಿ ಗಂಜಿ ಬಸಿಯುತ್ತಿದ್ದ ಬಂಡೆ ಇದೆ."

ಶಕ್ಕು, ಲೀಲ, ಅಂಪು, ಯಶೋದ ಅಣ್ಣನ ಜೊತೆಗೆ ಹೂಗುಟ್ಟುತ್ತ ಬರುತ್ತಿದ್ದರು.

ಕಾಂತ, ರವಿ, ಮಂಜು ಎಲ್ಲರು ಕಿಲಕಿಲ ನಗುತ್ತ, ಏಕನಾಥೇಶ್ವರಿಯ ದೇವಾಲಯವನ್ನೂ ಸಮೀಪಿಸಿದರು.

"ಇದೇನು ಕಾಕಪ್ಪ ಉಯ್ಯಾಲೆ ಕಂಭ ಇದ್ದಹಾಗಿದೆ. ಆದರೆ ಸರಪಳಿ, ಮಣೆ ಅದೆಲ್ಲ ಇಲ್ಲ." ಕಾಂತ ಕೇಳಿದ.

"ಹೌದು ಇದು ಉಯ್ಯಾಲೆ ಕಂಭವೇ. ಮದಕರಿನಾಯ್ಕರು ಕಟ್ಟಿಸಿದ್ದು. ಈಕೆ ಅವರ ಮನೆದೇವತೆ" ಎನ್ನುತ್ತ, ಅಣ್ಣಾ ನಿಂತಲ್ಲೆ ಸುತ್ತುತ್ತ ಗಲ್ಲ ಬಡಿದುಕೊಂಡು ನಮಸ್ಕಾರ ಮಾಡಿ ಅಲ್ಲಿನ ಕಂಭಗಳಲ್ಲಿಟ್ಟಿದ್ದ ಹೂವನ್ನು ಕಣ್ಣಿಗೊತ್ತಿ ಕಿವಿಗೆ ಸೂಡಿ ಕೊಂಡರು. ಅನಂತು ಸ್ವಲ್ಪ ಕುಂಕುಮ ತಂದು ಅಣ್ಣಾನ ಹಣೆಗೂ ಹಚ್ಚಿ, ತಾನೂ ಹಚ್ಚಿಕೊಂಡ. ಎಲ್ಲರೂ ಹಾರಿ ಹಾರಿ ಗಂಟೆ ಬಾರಿಸಿ ವಿನೋದಪಟ್ಟರು.

"ಬಹಳ ಗಾಳಿ ಇದೆ. ಹಿಡಿಂಬನ ಹಲ್ಲು ನೋಡೋಕೆ ಆ ಗುಡ್ಡ ಸೇರಬೇಕು. ನಿಮಗೆಲ್ಲ ಆಗೋಲ್ಲ" ಎಂದು ಅಣ್ಣಾ ಕೆಣಕಿದರು.

"ನಮಗೆಲ್ಲ ಆಗುತ್ತೆ. ಬಹಳ ಗಾಳಿ ಇದ್ದರೆ ಬಗ್ಗಿಕೊಂಡು ಹೋಗಬೇಕು" ಎನ್ನುತ್ತ ಕಾಂತ ಹೊರಟೇಬಿಟ್ಟ. ಅವನ ಹಿಂದೆ ರೈಲಿನಂತೆ ಇತರರು ನಡೆದರು.

ಎರಡು ಗುಡ್ಡಗಳನ್ನು ಸೇತುವೆಯಂತೆ ಇಕ್ಕಟ್ಟಾದ ಒಂದು ದಾರಿ ಸೇರಿತ್ತು. ದಾರಿಯ ಪಾರ್ಶ್ವಗಳಲ್ಲಿ ಆಳವಾದ ಕಣಿವೆಗಳು ಹಬ್ಬಿಕೊಂಡಿದ್ದವು. ಭರೋ ಎಂದು ಸದ್ದು ಮಾಡುತ್ತ ಗಾಳಿ ಅವರನ್ನು ನಿಲ್ಲಗೊಡದಂತೆ ಬೀಸುತ್ತಿತ್ತು. ಅಂತಹ ಮಧ್ಯಾಹ್ನದಲ್ಲೂ ತೆಳ್ಳನೆಯ ಬಿಳಿ ಮಂಜು ಅವರನ್ನು ವ್ಯಾಪಿಸಿಕೊಂಡಿತ್ತು. ನೆತ್ತಿಯಮೇಲಿಂದ ಪಶ್ಚಿಮದ ಕಡೆಗೆ ವಾಲುತ್ತಿದ್ದ ಸೂರ್ಯನಿಗೆ ಅಲ್ಲಿ ಶಾಖವೇ ಇರಲಿಲ್ಲ. ದುರ್ಗದ ಆಸುಪಾಸಿನ ಸೀಮೆ ಅಲ್ಲಿ ಮಲಗಿ ಮರವಟ್ಟಂತೆ ತೋರುತ್ತಿತ್ತು. ಭಯಮಿಶ್ರಿತವಾದ ಒಂದು ಸಂತಸದಿಂದ, ಹುಡುಗರು ಹಿಡಿಂಬನ ಹಲ್ಲು ಇರುವ ಗುಡ್ಡವನ್ನು ತಲುಪಿದರು. ತೃಪ್ತಿಯ ಗೆಲುವಿನ ಭಾವದಿಂದ ಚಪ್ಪಾಳೆ ತಟ್ಟಿ ನಕ್ಕರು.

"ಸೈ ನೀವೀಗ ದುರ್ಗದ ಮರಿಗಳು ಚಿನ್ನದ ಗರಿಗಳು" ಎನ್ನುತ್ತ ಸಣ್ಣ ಒಂದು ಕಮಾನಿನಾಕಾರದ ಕಟ್ಟಡದೊಳಗೆ, ಬೀಗಮುದ್ರೆಯಾಗಿ ನಿಂತ ಹಲ್ಲಿನಾಕಾರದ ಒಂದು ಮೊಳ ಉದ್ದದ ಶಿಲೆಯನ್ನು ಇದೇನೆ ಹಿಡಿಂಬನ ಹಲ್ಲು ಎಂದು ತೋರಿಸಿದರು.

"ಓಹೋ ಇಂತಹ ಹಲ್ಲಿರಬೇಕಾದ್ರೆ ಆ ಹಿಡಿಂಬ ಇನ್ನೆಷ್ಟು ಇರಬಹುದು?" ಎಂದು ಲೀಲ ಸೋಜಿಗಪಟ್ಟಳು.

"ಅವನನ್ನು ಕೊಂದ ಭೀಮ ಎಷ್ಟು ಗಟ್ಟಿ ಇರಬಹುದು!" ಎಂದು ಮಂಜು ಸೇರಿಕೊಂಡ.

ಸುತ್ತಣ ರುದ್ರರಮಣೀಯ ಪ್ರಕೃತಿಯನ್ನು ನೋಡುತ್ತ ಇತರರು ಮೈಮರೆತಿದ್ದರು. ಊರಿನ ಮನೆಗಳು ಬರಿಯ ಬಣ್ಣದ ಚುಕ್ಕೆಗಳಾಗಿ ತೋರುತ್ತಿದ್ದವು. ಅಲ್ಲಿಂದ ನಿಧಾನವಾಗಿ ಹುಡುಗರ ದಂಡು ಇಳಿಯತೊಡಗಿತು. ದುರ್ಗದ ಕೋಟೆಗೆ ಮುಂಬಾಗಿಲ ಹಾದಿಯನ್ನು ಸೇರಿದರು.

"ನೀವೆಲ್ಲ ನೋಡಬೇಕಾದ ಸ್ಥಳ ಈ ದುರ್ಗದ ಮೇಲೆ ಇನ್ನೂ ಬೇಕಾದ ಹಾಗಿದೆ. ತುಪ್ಪದ ಕೊಣವಿದೆ. ನಾಯಕರ ಮದ್ದು ಅರಿಯುವ ಕಲ್ಲಿದೆ. ಇಲ್ಲಿಂದ ಸುಮಾರು ದೂರಕ್ಕೆ ಧವಳಪ್ಪನ ಗುಡ್ಡವಿದೆ."

"ಇನ್ನೊಂದು ಸಲ ಬಂದಾಗ ಅದನ್ನೆಲ್ಲ ತೋರಿಸಬೇಕು" ಎಂದಳು ಯಶೋದ. ಅವಳ ಕಾಲು ಆಗಲೇ ಪದ ಹೇಳುತ್ತಿದ್ದವು.

"ಈಗಲೇ ನಡೀರಿ ಅದಕ್ಕೇನು?" ಎಂದು ಅಣ್ಣ ಹೊರಟು ನಿಂತರು.

"ಬೇಡ್ರಣ್ಣ ಅದೆಲ್ಲ ಹೇಗಿದೆ ಅಂತ ಹೇಳಿಬಿಡಿ ಸಾಕು" ರವಿ ತೀರ್ಮಾನಿಸಿದ.

ಅಣ್ಣ ಶುರು ಮಾಡಿದರು, "ಮದ್ದು ಅರೆಯುವ ಕಲ್ಲು ಅಂದರೆ ದೊಡ್ಡ ಬೀಸುವ ಕಲ್ಲು. ತುಪ್ಪದ ಕೊಣ ಅಂದರೆ ನಾಯಕರು ಒಂದು ವರ್ಷಕ್ಕೆ ಬೇಕಾಗುವಷ್ಟು ತುಪ್ಪ ಸಂಗ್ರಹಿಸುತ್ತಿದ್ದ ಸುಮಾರು ದೊಡ್ಡ ಕಲ್ಲಿನ ಕೊಳ."

"ಅಷ್ಟೊಂದು ತುಪ್ಪ ಯಾರಿಗೆ?" ಕೇಳಿದ ಮಂಜು.

"ಸೈನಿಕರಿಗೆ, ರಾಣಿಯರಿಗೆ, ನಾಯಕರಿಗೆ ಎಲ್ಲರಿಗೂ."

"ಹುಂ ಧವಳಪ್ಪನ ಗುಡ್ಡ?" ಕಾಂತ ಆತುರಪಟ್ಟ.

"ಧವಳಪ್ಪ ಅಂತ ಒಬ್ಬ ಸಂನ್ಯಾಸಿ. ಗುಡ್ಡದ ಮೇಲೆ ಅವನ ಸಮಾಧಿ ಇದೆ. ಅವನಿಗೆ ಒಬ್ಬ ಫಕೀರ ದುಗ್ಗಾಣಿ ಸಾಲ ಕೊಟ್ಟಿದ್ದ. ಅದನ್ನು ತೀರಿಸಲಾರದೆ, ಸಾಯುವಾಗ ನನ್ನ ಪರವಾಗಿ ನೀವೆಲ್ಲ ತೀರಿಸಿ ಅಂತ ಹಿಂದೂಗಳನ್ನು ಕೇಳಿಕೊಂಡನಂತೆ. ಆ ಪ್ರಕಾರ ಹಿಂದೂಗಳು ಅಲ್ಲಿಗೆ ಹೋದರೆ ಎರಡು ಕಾಸನ್ನು ಅವನ ಸಮಾಧಿಯ ಮೇಲೆ ಇಟ್ಟು ಬರ್‍ತಾರೆ. ಯಾರಾದರೂ ಸಾಬರು ಅದನ್ನು ತೆಗೆದು ಜೇಬಿಗೆ ಹಾಕ್ಕೊಂತಾ ರೆ."

"ಅಯ್ಯಪ್ಪ... ದುಗ್ಗಾಣಿ ಇರಲಿಲ್ಲವೆ? ನನ್ನತ್ತಿರ ಒಂದು ರೂಪಾಯಿ ಇದೆ" ಎಂದ ಮಂಜು.

"ಓಹೋ ಬಹಳ ತಮಾಷೆಯಾಗಿದೆ. ನಾಳೆ ನಾವೂ ಹೋಗಿ ಎರಡು ಕಾಸು ಕೊಡಬೇಕು" ಎಂದಳು ಶಕ್ಕು.

"ಇದ್ಯಾವ ಲೆಖ್ಖಾಚಾರ! ಸಾಲ ತಗೊಂಡವ ಒಬ್ಬ. ತೀರಿಸುವವರು ಸಾವಿರಾರು

ಮಂದಿ" ಸೋಜಿಗಪಟ್ಟಳು ಲೀಲ.

"ನಾಳೆ ನೀವೆಲ್ಲ ಅಲ್ಲಿ ದುಗ್ಗಾಣಿ ಇಡಿ ನಾ ತಗೊಂಡುಬಿಡ್ತೇನೆ" ಎಂದು ಅನಂತಿ ಚಿಟಿಕಿ ಹಾರಿಸಿದ.

"ಹಾಗಾದ್ರೆ ನೀ ಸಾಬ್ರು... ಅನ್ವರ್ ಸಾಹೇಬ್" ಯಶೋದ ನಾಮಕರಣ ಮಾಡಿದಳು. ಅದುವರೆಗೂ ನಸುನಗುತ್ತ ಸುಮ್ಮನಿದ್ದ ಕಾಕಪ್ಪ "ನಿಮಗೆಲ್ಲ ಹತ್ತೋಕಾಗಲ್ಲ ಅದು. ಬಹಳ ಕಷ್ಟ. ಬಂಡೆಗಳೆಲ್ಲ ಸೀಳು ಸೀಳಾಗಿ, ಬಗ್ಗಿದರೆ ಪ್ರಪಾತ ಕಾಣಿಸಿ ತಲೆ ತಿರುಗಿ ಬಿಡ್ತದೆ" ಎಂದುಬಿಟ್ಟರು.

"ಯಾಕೆ ಕಾಕಪ್ಪ ಈ ಮೆಟ್ಟಿಲ ಮೇಲೆಲ್ಲ ಕುದುರೆಯ ಲಾಳದ ಗುರುತಿದೆ?" ಎಂದು ಮಂಜು ಕೇಳಿದ.

"ದುರ್ಗದ ಅರಮನೆಗೆ ನಾಯಕರ ಸವಾರಿ ಹೋಗುವಾಗ ಅವರ ಕುದುರೆಯ ಗೊರಸಿನ ಗುರುತು."

"ಹೌದು ಅವರೆಲ್ಲ ರೊಟ್ಟಿ ಬೆಣ್ಣೆ ತಿಂದು ವಜನ್ನಾಗಿರ್ತಾರೆ. ಅದಕ್ಕೆ ಕುದುರೆಯ ಗೊರಸು ಬಲವಾಗಿ ಊರಿಬಿಟ್ಟೈತಿ" ಎಂದು ಅಂಪು ಅಣ್ಣನನ್ನೂ ಅಣಕಿಸಿದಳು.

ಎಲ್ಲರೂ ಪಕಪಕನೆ ನಗುತ್ತ ಮೆಟ್ಟಿಲುಗಳ ಮೇಲೆಯೇ ಕುಳಿತುಬಿಟ್ಟರು.

"ಕೋಟೆಯ ಗೋಡೆಗಳಲ್ಲಿ ಇಷ್ಟಿಷ್ಟು ದೂರಕ್ಕೆ ಗೂಡುಗಳಿವೆ" ಎಂದು ಪದ್ದು ಗುರುತಿಸಿದ.

"ಯಾಕೆ ಹೇಳ್ರಿ ನೋಡೋಣ."

"ದೀಪ ಹಚ್ಚಿ ಇಡಬಹುದು" ಲೀಲ ಊಹಿಸಿದಳು.

"ಮತ್ತೆ ಕೋಟೆಯ ಒಂದೊಂದು ಸುತ್ತಿನ ದ್ವಾರ ಒಂದೊಂದು ಕಡೆಗಿದೆಯಲ್ಲ ಯಾಕೆ ಹೇಳಿ" ಅಣ್ಣಾ ಕೇಳಿದರು.

ಸ್ವಲ್ಪ ಹೊತ್ತು ಎಲ್ಲರೂ ಯೋಚಿಸಿದರು. ಕೊನೆಗೆ ಕಾಂತ "ಶತ್ರುಗಳು ಬರುವಾಗ ಸ್ವಲ್ಪ ಬಳಸಲಿ, ಅಷ್ಟರಲ್ಲಿ ಸಾಧ್ಯವಾದಷ್ಟು ಅವರನ್ನು ತಡೆದು ಸೋಲಿಸೋಣ ಎಂದಿರಬಹುದು."

ಹೌದೆಂದು ಅಣ್ಣಾ ತಲೆದೂಗಿ ಮುಂದೆ ಅವರನ್ನು ದಾರಿಯಲ್ಲಿ ಸಿಗುವ ಗಣಪತಿಯ ದೇವಾಲಯದ ಮುಂದೆ ನಿಲ್ಲಿಸಿದರು. "ಈ ಗುಡಿ ನಿಮಗೆಲ್ಲ ಬಹಳ ಮುಖ್ಯ. ಯಾಕೆಂದರೆ ಕನ್ನಡದ ಕವಿ ಹೊಯಿಸಳರು ಇಲ್ಲೇ ಬಂದು ಕುಳಿತು ಮಕ್ಕಳಿಗಾಗಿ ಕವನ ರಚಿಸಿದರು."

ಗಣಪತಿಗೆ ಕೈಮುಗಿದು, "ಬಂದ ಬಂದ ಸಂತಮ್ಮಣ್ಣಾ, ಪಟಾಸು ಪೆಟ್ಲು ಒಳ ಜೇಬಲ್ಲಿ, ಕಲ್ಯಾಣಿ ಸೇವೆ ಜೇಬಿನ ಬುಡದಲಿ, ಪುಠಾಣಿ ಪುರಿಯು ಮೇಲೊಂದಿಷ್ಟು,

ಗೋಲಿ ಬಳಪ ಮತ್ತೊಂದಿಷ್ಟು, ಬಂದ ಬಂದ ಸಂತಮ್ಮಣ್ಣ' ಎನ್ನುತ್ತ ಹಾಡುತ್ತ ಎಲ್ಲರೂ ಮೆಟ್ಟಿಲಿಳಿದರು.

ದಾರಿಯಲ್ಲಿ ಕಾಮನ ಹೊಂಡ ಸಿಕ್ಕಿತು. ಸುಮಾರು ಚಿಕ್ಕದಾದ ಆ ಹೊಂಡದಲ್ಲಿ ಜನ ಬಟ್ಟೆ ಒಗೆಯುವ, ಸ್ನಾನ ಮಾಡುವ ಉದ್ಯೋಗದಲ್ಲಿದ್ದರು. ದುರ್ಗದ ಬುಡದಲ್ಲಿ ಗಾಡಿ ಮೂಕಿ ಕೆಳಗೆ ಮಾಡಿಕೊಂಡು ನಿಂತಿತ್ತು. ಮರದ ನೆರಳಲ್ಲಿ ಎತ್ತುಗಳನ್ನು ಕಟ್ಟಿ ಅದಕ್ಕೆ ಒಣಹುಲ್ಲು ಹಾಕಿ ರಾಮ ಬೀಡಿ ಸೇದುತ್ತ ಕುಳಿತಿದ್ದ.

ಗಾಡಿಯಲ್ಲಿ ಕುಳಿತು ತೂಕಡಿಸುತ್ತ ಮೋರೆ ಬಾಡಿದ್ದರೂ, ಹೊಸ ಉತ್ಸಾಹದಿಂದ ಮಕ್ಕಳು ಮನೆ ಸೇರಿದರು.

# ಮಿಂಚುಳ್ಳಿ

## ಎನ್. ಪ್ರಹ್ಲಾದರಾವ್

ಬೆಳಗಿನ ಜಾವದ ಮಬ್ಬು ಕಳೆದು ಎಲ್ಲಾ ಕಡೆಯೂ ಕೆಂಬೆಳಕು ಹರಡಲು ಪ್ರಾರಂಭವಾಗಿ ಕಾಡೆಲ್ಲ ಎಚ್ಚೆತ್ತಂತೆ ಅನೇಕ ಹಕ್ಕಿಗಳು ಕೂಗತೊಡಗಿದವು.

"ನೋಡು ರಮಿ, ಇಲ್ಲಿ ಸುತ್ತಲೂ ಇಷ್ಟೊಂದು ಮರಗಳಿವೆ. ಒಂದೊಂದು ಮರದಲ್ಲೂ ಅನೇಕ ಹಕ್ಕಿಗಳು ಕೂತಿವೆ, ಕೂಗುತ್ತಿವೆ. ರೆಂಬೆಯಿಂದ ರೆಂಬೆಗೆ ಹಾರುತ್ತಿವೆ. ಥಕ್ಕನೆ ನೋಡಿದರೆ ಒಂದು ಹಕ್ಕಿಯೂ ಕಣ್ಣಿಗೆ ಬೀಳುವುದಿಲ್ಲ. ಏನು, ಈ ಗಿಡಮರಗಳೇ ಹಾಡುತ್ತಿವೆಯೋ ಎಂದು ಒಂದೊಂದು ಸಾರಿ ಭ್ರಮೆಯಾಗುತ್ತದೆ. ಒಂದೊಂದು ಹಕ್ಕಿಯೂ ತನ್ನದೇ ಆದ ರೀತಿಯಲ್ಲಿ ನಿನ್ನನ್ನು ಕೂಗಿ ಕರೆಯುತ್ತಿದೆ ನೋಡು.

"ಹಕ್ಕಿಗಳನ್ನು ಕಣ್ಣಲ್ಲಿ ನೋಡದಿದ್ದರೂ ಅವುಗಳ ಶಬ್ದವನ್ನು ಕಿವಿಯಿಂದ ಕೇಳಿ ಅವು ಅಂಥವೇ ಎಂದು ಗುರುತಿಸಬಹುದು. ಅದಕ್ಕೆ ಸ್ವಲ್ಪ ಅನುಭವ ಬೇಕು. ಅಥವಾ ದೂರದಲ್ಲಿ ಕೂತಿರುವ ಹಕ್ಕಿಯ ಬಣ್ಣ ಗಾತ್ರ ನಡಿಗೆ ಇವನ್ನು ಗಮನಿಸಿ, ಅದು ಇಂಥದೇ ಎಂದು ಬೇಕಾದರೂ ಹೇಳಬಹುದು."

ಈ ಮಾತು ಮುಗಿಯುತ್ತಿದ್ದಂತೆ ನಾವು ಊರ ಹೊರಗಿನ ಪ್ರವಾಸಿ ಮಂದಿರದ ಹತ್ತಿರ ಬಂದಿದ್ದೆವು. ಅದರ ಆಚೆ ಉಕ್ಕಡವಿದೆ. ಅಲ್ಲಿಂದ ಹತ್ತು ಮಾರಿನಲ್ಲಿ ನಾವು ಅಂದು ನೋಡಲು ಹೊರಟ ತುಂಗಾ ನಾಲೆ ಹರಿಯುತ್ತಿದೆ.

ಬೆಂಗಳೂರು ಹೊನ್ನಾವರ ಘಾಟಾಮಾರ್ಗಕ್ಕೆ ಅಡ್ಡಲಾಗಿ ಆ ನಾಲೆ ಹರಿಯುತ್ತದಾದ ಕಾರಣ, ವಾಹನಗಳ ಪ್ರಯಾಣಕ್ಕೆ ಅಡ್ಡಿಯಾಗದಿರಲಿ ಎಂದು ಸುಮಾರು ಎರಡು ಫರ್ಲಾಂಗ್ ಉದ್ದದ ಸುರಂಗವನ್ನು ಕೊರೆದಿದ್ದಾರೆ. ನೀರು ಸುರಂಗದಲ್ಲಿ ಹರಿಯುತ್ತದೆ. ರಸ್ತೆಯಿಂದ ಅರ್ಧ ಫರ್ಲಾಂಗ್ ಪಕ್ಕದಲ್ಲಿ ನಡೆದರೆ ನಾಲೆ ಕಾಣುತ್ತದೆ. ಅದು ಮುಂದೆ ಶಿವಮೊಗ್ಗೆಯ ಜೈಲಿನ ಮುಂಭಾಗದಲ್ಲಿ ಹರಿದು ಹೊನ್ನಾಳಿಯ ಕಡೆ ಹೋಗುತ್ತದೆ.

ರಮಿಗೆ ಆಗಲೆ ಕಾಲು ಸೋತುಹೋಗಿತ್ತು. ಅದ್ದರಿಂದ ನಾಲೆಯ ಪಕ್ಕದ ಕಲ್ಲು ಬೆಂಚಿನ ಮೇಲೆ ಕೂಡಬೇಕಾಗಿ ಬಂತು.

ಆಗತಾನೆ ಹುಟ್ಟಿ ಮೇಲೇರಿ ಬರುತ್ತಿದ್ದ ಸೂರ್ಯನ ಹೊಂಬಿಸಿಲು ನಾಲೆಯ ದಡಗಳ ಮೇಲೆ ನಿಧಾನವಾಗಿ ಹಬ್ಬುತ್ತಿತ್ತಾದರೂ ನಾಲೆಯ ನೀರನ್ನಿನ್ನೂ ಮುಟ್ಟಿರಲಿಲ್ಲ. ಸೊಂಟ ಮಟ್ಟ ಇದ್ದಿರಬಹುದು, ನಾಲೆಯ ನೀರು. ನೀಲವಾಗಿ, ಆಕಾಶವನ್ನು ಪ್ರತಿಬಿಂಬಿಸುತ್ತ, ನಿಧಾನವಾಗಿ ಹರಿಯುತ್ತಿದ್ದ ಆ ನೀರಿನ ಮೇಲೆ ನಮ್ಮೆಲ್ಲರ ದೃಷ್ಟಿಯೂ ಕೇಂದ್ರೀಕೃತ ವಾಗಿತ್ತು.

ಅಷ್ಟರಲ್ಲಿ ರಮಿ ನನ್ನ ತೋಳು ಹಿಡಿದು ಜಗ್ಗಿ, "ಅಣ್ಣಾ, ಅಣ್ಣಾ, ಅಲ್ಲಿ ನೋಡಿ, ಆ ಹಕ್ಕಿ ಯಾವುದು? ಎಷ್ಟು ಚೆನ್ನಾಗಿದೆ!" — ಎಂದಳು.

ಬಂಡೆಯ ಮೇಲೆ ಕೂತ ಒಂದು ಸಣ್ಣ ಹಕ್ಕಿ ಚಿರಕ್ ಚಿರಕ್ ಎಂದು ಕೂಗುತ್ತ ಅಲ್ಲಿಂದ ಎದ್ದು ಸ್ವಲ್ಪ ದೂರ ನೀರಿನ ಬದಿಯಲ್ಲಿಯೇ ಹಾರುತ್ತ ಹೋಗಿ ದೂರದ ಬಂಡೆಯೊಂದರ ಮೇಲೆ ಕೂತಿದ್ದನ್ನು ನಾನೂ ನೋಡಿದೆ. ಅದರೂ ಏನನ್ನೂ ಅರಿಯ ದವನಂತೆ, "ಏನು ರಮಿ? ಎಲ್ಲಿ? ನೀನು ನೋಡಿದೆಯ?" ಎಂದು ಕೇಳಿದೆ.

"ನೋಡಣ್ಣಾ, ಇಗೋ ಈ ಬಂಡೆಯ ಮೇಲೆ ಕೂತಿತ್ತು. ಸರಕ್ ಅಂತ ಹಾರಿ ಹೋಗಿ ಅಗೋ ಆ ಬಂಡೆಯ ಮೇಲೆ ಕೂತಿತು. ತೋರಿಸುತ್ತೇನೆ ಬನ್ನಿ. ಹಕ್ಕಿ ಗುಬ್ಬಿಗಿಂತ ಸ್ವಲ್ಪ ದೊಡ್ಡದಾಗಿದೆ. ಕೊಕ್ಕು ಉದ್ದವಾಗಿ ಚೂಪಾಗಿದೆ. ಹಾರಿದಾಗ ಹಕ್ಕಿಯ ಬಣ್ಣ ಹೇಗಿತ್ತು ಅಂತೀರಿ, ಪಳಪಳ ಅಂತ ಹೊಳೀತಾ ಇತ್ತು. ನೀಲಿ, ಕೆಮ್ಮಣ್ಣು ಬಣ್ಣ ಎರಡೂ ಸೇರಿದ ಹಾಗಿತ್ತು. ಒಳ್ಳೆ ಮಿಂಚಿನ ಹಾಗೆ ಹೊಳೀತಾ ಇತ್ತು" — ಹೀಗೆನ್ನುತ್ತ ವೇಣು ಪಚ್ಚಿ ಎಲ್ಲರನ್ನೂ ಕರೆದುಕೊಂಡು ರಮಿ ಹಕ್ಕಿ ಕೂತಲ್ಲಿಗೆ ಹೊರಟಳು. ಇಷ್ಟು ಜನ ಇಷ್ಟೊಂದು ಗಲಾಟೆ ಮಾಡುತ್ತ ಹತ್ತಿರ ಹೋದರೆ ಹಕ್ಕಿ ಅಲ್ಲೇ ಕೂತಿರುತ್ತದೆಯೆ? ಮತ್ತೆ ಅದು ಅಲ್ಲಿಂದ ಎದ್ದು ದೂರದ ಒಂದು ಬಂಡೆಯ ಮೇಲೆ ಹೋಗಿ ಕೂತಿತು. ಎರಡನೆಯ ಬಾರಿ ಹಾರಿದಾಗ ಎಲ್ಲರೂ ಅದನ್ನು ನೋಡಿದರು. ಮಿಂಚಿನಂತೆ ಇದ್ದ ಅದರ ಮೈಯ ಹೊಳಪನ್ನು ಕಂಡು ಎಲ್ಲರಿಗೂ ಪರಮಾಶ್ಚರ್ಯ.

"ಯಾವುದಣ್ಣಾ ಆ ಹಕ್ಕಿ?" ಎಂದು ಎಲ್ಲರೂ ಕೇಳಿದರು.

"ಅಣ್ಣಾ ಆ ಹಕ್ಕಿಯ ಹೆಸರೇನು?" ಎಂದು ಕೇಳಿದ ವೇಣು.

"ಮಗು, ಅದರ ಹೆಸರು ಮೀಂಚುಳ್ಳಿ ಎಂದು. ಹೆಸರು ಚೆನ್ನಾಗಿದೆಯೇ? ಅದು ಸಾಮಾನ್ಯವಾಗಿ ನೀರಿನ ಆಶ್ರಯ ಇದ್ದಲ್ಲಿ ವಾಸ ಮಾಡುತ್ತದೆ. ನೀವು ವಾರವಾರವೂ ನನ್ನ ಜೊತೆಯಲ್ಲಿ ತಿರುಗಾಡಲು ಬರುತ್ತೀರಲ್ಲ. ಬಂದಾಗ ಮೀಂಚುಳ್ಳಿ ಎಲ್ಲಿ ಇರುತ್ತೆ, ಏನು ಮಾಡುತ್ತೆ ಎಂಬುದನ್ನು ನಿಧಾನವಾಗಿ ನೋಡಿ."

ರಮಿ ನಾನಾಡುವ ಮಾತುಗಳನ್ನು ಕೇಳುತ್ತಲೇ ತಂದಿದ್ದ ಚೀಲದಲ್ಲಿ ಮೆಲ್ಲಕೆ ಕೈಹಾಕಿದಳು. ಆದ ಕಾರಣ ಮೀಂಚುಳ್ಳಿಯ ಮಾತು ಅಲ್ಲಿಗೆ ನಿಲ್ಲಬೇಕಾಯಿತು. ಕಾಫಿ ತಿಂಡಿ ಎಲ್ಲ ಆದ ಮೇಲೆ ರಮಿಗೆ ನೀರು ಕುಡಿಯಬೇಕು ಅನ್ನಿಸಿತು. ನಾವೆಲ್ಲ ಸ್ವಲ್ಪ ಕೈತೊಳೆಯಬೇಕಾಗಿತ್ತು. ಎಲ್ಲ ನಾಲೆಗೆ ಇಳಿದೆವು.

ನಾವು ನೀರಿಗೆ ಇಳಿದಿದ್ದ ಸ್ಥಳದಲ್ಲಿ, ನಮ್ಮ ಎದುರಿನ ದಡದ ಒಂದು ಕಲ್ಲು ಪೊಟರೆಯಿಂದ ಮೀಂಚುಳ್ಳಿಯೊಂದು ಚಿರಕ್ ಚರಕ್ ಎಂದು ಕೂಗುತ್ತ ಹಾರಿ ಹೋದದ್ದನ್ನು ನಾವೆಲ್ಲ ಚೆನ್ನಾಗಿ ನೋಡಿದೆವು.



ಮನೆಗೆ ಬಂದು ಊಟವಾದ ಮೇಲೆ ಹುಡುಗರ ಕೈಗೆ "ಇಂಡಿಯಾ ದೇಶದ ಹಕ್ಕಿಗಳು" ಎಂಬ ಪುಸ್ತಕ ಕೊಟ್ಟೆ. ಅದರಲ್ಲಿದ್ದ ಮೀಚುಳ್ಳಿಯ ಚಿತ್ರವನ್ನು ಹುಡುಕಿ ತೆಗೆದು, ತೆಳುವಾದ ಕಾಗದವನ್ನು ಅದರ ಮೇಲಿಟ್ಟು ಒಂದೊಂದು ರೇಖಾಚಿತ್ರವನ್ನು ಮಾಡಿಕೊಂಡು ವೇಣು ಪಚ್ಚಿ ರಮಿ ಮೂವರೂ ಸಂಜೆಯವರೆಗೂ ಅದಕ್ಕೆ ಬಣ್ಣ ಹಾಕುತ್ತಾ ಕುಳಿತರು.

## 2

ಪ್ರತಿದಿನವೂ ಯಾವುದಾದರೊಂದು ಕಥೆ ಕೇಳಿದ ಮೇಲೆಯೆ ರಮಿ ಮಲಗಬೇಕು. ಅದಕ್ಕಾಗಿ ಮಕ್ಕಳಿಗೆ ಅಂದು ಮೀಚುಳ್ಳಿಯ ಕಥೆಯನ್ನು ಹೇಳಿದೆ.

ಒಂದು ಸಾರಿ ಇಡೀ ಮಾನವಲೋಕವೇ ಅಧರ್ಮದಲ್ಲಿ ಮುಳುಗಿಹೋಯಿತು. ಜನ ಕುಹಕಿಗಳಾಗಿ ಕಪಟಿಗಳಾಗಿ ಇತರರನ್ನು ಶೋಷಿಸತೊಡಗಿದರು. ಸಜ್ಜನರ ಕಷ್ಟ ಹೆಚ್ಚಾಯಿತು.

ಆ ಕಾಲದಲ್ಲಿ ನೋವ ಎಂಬ ಒಬ್ಬ ಸಾಧು ಪುರುಷ ಇದ್ದ. ಆತನ ಮೇಲೆ ಭಗವಂತನ ಕೃಪೆ ಸದಾ ಇರುತ್ತಿತ್ತು.

ಭಗವಂತ ನೋವನನ್ನು ಕುರಿತು ಹೀಗೆ ಹೇಳಿದ:

"ನೋಡು, ವತ್ಸ, ಲೋಕವೆಲ್ಲ ಕೆಟ್ಟು ಹಾಳಾಗುತ್ತಿದೆ. ನಾನೀಗ ಇಡಿಲೋಕವನ್ನೆ ಪ್ರಳಯಜಲದಲ್ಲಿ ಅದ್ದಿಬಿಡುತ್ತೇನೆ. ನಾನು ಉಕ್ಕಿಸುವ ನೀರು ಈ ಭೂಮಂಡಲವನ್ನೆಲ್ಲ ಆವರಿಸಿ ಮುಳುಗಿಸಿಬಿಡುತ್ತದೆ. ಆ ಸಮಾಧಿಯಿಂದ ಯಾರೂ ಪಾರಾಗುವಂತಿಲ್ಲ. ನೀನು ಮಾತ್ರ ಅಸಂಖ್ಯ ಜೀವರಾಶಿಯಲ್ಲಿ ಒಂದೊಂದು ಜಾತಿಯ ಪ್ರಾಣಿಗಳಲ್ಲಿ ಒಂದೊಂದು ಜೊತೆ ಮಾತ್ರ ಒಂದು ಗಂಡು ಒಂದು ಹೆಣ್ಣು — ಹೀಗೆ ನಿನ್ನ ದೋಣಿಯಲ್ಲಿ ಇರಿಸಿಕೋ. ನಿನ್ನ ಬಂಧು ಬಳಗದವರನ್ನು ಜೊತೆಯಲ್ಲಿ ಕರೆದುಕೊ. ದೋಣಿಯಲ್ಲಿ ಕುಳಿತು ಪಾರಾಗಿ ಬದುಕು."

ನೋವ ದೇವರು ಹೇಳಿದಂತೆ ಮಾಡಿದ.

ಅಲ್ಲಿಂದ ಏಳು ದಿನಗಳ ಅನಂತರ ಸುಮಾರು ನಲವತ್ತು ದಿನ ಹಗಲು ರಾತ್ರಿ ಎನ್ನದೆ ನಿರಂತರವಾಗಿ ಮಳೆ ಸುರಿಯಿತು. ನೆಲದ ಚಿಲುಮೆಗಳೆಲ್ಲ ಬಾಯ್ದೆರೆದು ನೀರನ್ನು ಉಕ್ಕಿಸಿದುವು. ಮೋಡಗಳು ದಟ್ಟೈಸಿ ಆಕಾಶವನ್ನು ಮುಚ್ಚಿ ಹೆಪ್ಪುಗಟ್ಟಿ ನಿಂತುವು. ಆಕಾಶಗಂಗೆಯ ಅಣೆಕಟ್ಟಿನ ತೂಬುಗಳನ್ನು ತೆರೆದಂತೆ ಒಂದೇ ಸಮನೆ ಮಳೆ ಹೊಡೆಯಿತು.

ಬ್ರಹ್ಮಾಂಡವೆಲ್ಲ ಪ್ರಳಯ ಜಲದಲ್ಲಿ ಅದ್ದಿಹೋಗಿದ್ದರೂ ನೋವನ ದೋಣಿ ಮಾತ್ರ ನೀರಿನ ಮೇಲೆ ತೇಲುತ್ತಲೇ ಇತ್ತು.

ಬಂದ ನೀರು ನೂರೈವತ್ತು ದಿನಗಳ ವರೆಗೆ ಇಳಿಯಲಿಲ್ಲ.

ನಲವತ್ತನೆಯ ದಿನ ನೋವ ತನ್ನ ದೋಣಿಯ ಕಿಟಕಿ ತೆರೆದು ತನ್ನೊಡನೆ ತಂದಿದ್ದ ದೊಂಬಕಾಗೆಯನ್ನು ಹೊರಕ್ಕೆ ಹಾರಿಬಿಟ್ಟ. ಅದು ನೀರು ಇಳಿಮುಖವಾಗಿ ನೆಲ ಕಣ್ಣಿಗೆ ಕಾಣುವವರೆಗೂ ಹಿಂತಿರುಗಲಿಲ್ಲ. ಅನಂತರ ನೋವ ತನ್ನೊಡನಿದ್ದ ಪಾರಿವಾಳವನ್ನು ಹಾರಿಬಿಟ್ಟ. ಅದು ಎಷ್ಟು ಹೊತ್ತಾದರೂ ಹಿಂತಿರುಗಿ ಬರಲಿಲ್ಲ. ನೋವ ಬಹು ಕಾತರನಾದ. ತನ್ನೊಡನಿದ್ದ ಮೀಂಚುಳ್ಳಿಯೊಂದನ್ನು ಕೈಗೆ ತೆಗೆದುಕೊಂಡು ಪಾರಿವಾಳ ವನ್ನು ಪತ್ತೆ ಹಚ್ಚಿಕೊಂಡು ಬರಲು ಹಾರಿಬಿಟ್ಟ.

ಮಗು, ಆಗ ಮೀಂಚುಳ್ಳಿ ಹೇಗಿತ್ತು ಗೊತ್ತೆ? ಅದಕ್ಕೆ ಈಗಿನಂತೆ ಬಣ್ಣ ಬಣ್ಣದ ರೆಕ್ಕೆಗಳು ಇರಲಿಲ್ಲ. ಗುಬ್ಬಿಯಂತೆ ಅದೊಂದು ಸಾಧಾರಣವಾದ ಹಕ್ಕಿಯಾಗಿತ್ತು.

ಮೀಂಚುಳ್ಳಿ ನೀರಿನ ಮೇಲೆ ಹಾರತೊಡಗಿತು. ಎಷ್ಟೋ ವೇಳೆ ಏರುತ್ತಿದ್ದ ನೀರು ಅದರ ಕಾಲುಗಳಿಗೆ ತಗುಲುತ್ತಿತ್ತು. ನೀರು ಕಾಲಿಗೆ ಸೋಂಕಿದೊಡನೆ ಅದು ಇನ್ನೂ ಮೇಲಕ್ಕೆ ಹಾರುತ್ತಿತ್ತು. ಹೀಗಾಗಿ ಮೀಂಚುಳ್ಳಿ ಬಹಳ ಮೇಲಕ್ಕೆ ಹಾರಿಹೋದಾಗ ಆಕಾಶದ ಮನೋಹರವಾದ ನೀಲಿಯ ಬಣ್ಣ ಅದರ ರೆಕ್ಕೆಗಳಿಗೆ ತಗುಲಿ ಅವು ನೀಲಿಯಾದುವು. ಸೂರ್ಯನ ಪ್ರಖರವಾದ ಬಿಸಿಲು ಅದರ ಬೆನ್ನಿಗೆ ತಗುಲಿ ಮೈ ಎಲ್ಲ ಬೂದು ಮತ್ತು ಕೆಂಪು ಬಣ್ಣಕ್ಕೆ ತಿರುಗಿತು. ಮೀಂಚುಳ್ಳಿ ಮಾತ್ರ ಹಾರುತ್ತಲೇ ಇತ್ತು.

ಇತ್ತ ನೋವನ ದೋಣಿ ತೇಲುತ್ತ ಒಂದು ಬೆಟ್ಟದ ನೆತ್ತಿಯಲ್ಲಿ ಹೋಗಿ ನಿಂತಿತು. ಈ ಕಡೆ ಮೀಂಚುಳ್ಳಿ ಹಾರುತ್ತ ಹಾರುತ್ತ ಎಲ್ಲೆಲ್ಲಿಯೋ ಹೋಯಿತು. ಎಲ್ಲಿಯೂ ಪಾರಿವಾಳವನ್ನು ಕಾಣದೆ ಬಹು ಸಂಕಟಪಟ್ಟಿತು. ನೋವನ ದೋಣಿಗಾದರೂ ಹಿಂತಿ ರುಗೋಣ ಎಂದುಕೊಂಡು ದೋಣಿಯನ್ನು ಹುಡುಕುತ್ತ ಹೊರಟಿತು. ಹಾರಿತು, ಹಾರಿತು, ಹಾರಿತು. ಎಲ್ಲೆಲ್ಲಿ ಹಾರಿದರೂ ನೋವನ ದೋಣಿ ಅದಕ್ಕೆ ಕಾಣಿಸಲಿಲ್ಲ. ಎದುರಿಗೆ ಯಾರು ಸಿಕ್ಕಲಿ "ಏನಪ್ಪ ನೋವನ ದೋಣಿಯನ್ನು ನೋಡಿದಿರಾ?" ಎಂದು ಕೇಳುತ್ತಿತ್ತು. ನೋವನ ದೋಣಿ ಎತ್ತಹೋಯಿತೆಂದು ಯಾರಿಗೆ ಗೊತ್ತು?

ಮೀಂಚುಳ್ಳಿ ಪಾಪ, ಇವತ್ತಿಗೂ 'ನೋವನ ದೋಣಿ ಎಲ್ಲಿ?' ಎಂದು ಹುಡುಕುತ್ತ ಅಲೆಯುತ್ತಲೇ ಇದೆ.

ನೀರು ಬಗ್ಗಡವಾಗಿ ನಿಂತ ಹೊಂಡದ ಹತ್ತಿರ, ತುಂಬಿದ ಕೆರೆಯ ಏರಿಯ ಮೇಲೆ, ಹರಿಯುವ ನದಿಯ ಎರಡೂ ಪಕ್ಕಗಳಲ್ಲಿ, ಕಾಡಿನ ಕಿರುತೊರೆಗಳ ಉದ್ದಕ್ಕೂ ಬೆಟ್ಟದ

ಝರಿಗಳ ಸುತ್ತಮುತ್ತ, ನೀರು ನಿಂತ ಗದ್ದೆ ಹಾಳುಗಳಲ್ಲಿ, ನಾಲೆಗಳು ಪಕ್ಕಗಳಲ್ಲಿ — ಎಲ್ಲೆಂದರಲ್ಲಿ ಈ ಮೀಂಚುಳ್ಳಿ ಕೂತು ನೋವನ ದೋಣಿಗಾಗಿ ಈಗಲೂ ಕಾಯುತ್ತಿರುತ್ತದೆ. ಸಿಕ್ಕಸಿಕ್ಕವರನ್ನೆಲ್ಲ "ಎಲ್ಲಿ? ನೋವನ ದೋಣಿ ಎಲ್ಲಿ? ಬೆಳ್ಳಕ್ಕಿ, ನೀನು ಕಂಡೆಯಾ? ನೀರುಕೋಳಿ, ನೀನು ಹೇಳಬಲ್ಲೆಯಾ? ಕೊಕ್ಕರೆ, ನಿನಗೆ ಗೊತ್ತೆ? ನನ್ನ ನೋವನ ದೋಣಿ ಎಲ್ಲಿ ಹೋಯಿತೊ!" ಎಂದು ಕೇಳುತ್ತಿರುತ್ತದೆ. ದೋಣಿಯನ್ನು ಹುಡುಕುತ್ತ ಗಂಟೆಗಟ್ಟಲೆ ನೀರಿನ ಮೇಲೆ ಹಾರಾಡುತ್ತಿರುತ್ತದೆ.

ನೋಡು ರಮಿ, ನೋವನ ದೋಣಿ ಎಲ್ಲಿಹೋಯಿತು ಎಂದು ಮೀಂಚುಳ್ಳಿಗೆ ನೀನಾದರೂ ಹೇಳಬಾರದೆ!"

3

"ಮೀಂಚುಳ್ಳಿ ?"

"ಹಾಗೆಂದರೇನು? ಏಕೆ ಆ ಹಕ್ಕಿಗೆ ಆ ಹೆಸರು ಬಂತು?"

"ಮೀಂಚುಳ್ಳಿಯನ್ನು ಒಂದೊಂದು ಭಾಗದ ಜನ ಒಂದೊಂದು ಹೆಸರಿನಿಂದ ಕರೆಯುತ್ತಾರೆ. ಮೀಂಗುಲಿಗ ಹಕ್ಕಿ, ಜಾಲಗಾರ ಹಕ್ಕಿ, ಮೀನುಹಕ್ಕಿ, ಬೆಸ್ತರಹಕ್ಕಿ ಎಂದು ಕರೆಯುತ್ತಾರೆ. ಇಂಗ್ಲಿಷಿನಲ್ಲಿ ಅದನ್ನು ಕಿಂಗ್‌ಫಿಷರ್ ಎಂದು ಹೇಳುತ್ತಾರೆ. ಎಂದರೆ ಅದು ಬೆಸ್ತರರಾಜ, ರಾಜಬೆಸ್ತ, ಅದಕ್ಕೆ ಆ ಹೆಸರು ಹೇಗೆ ಬಂತು ಎಂಬುದನ್ನು ನೋಡೋಣ.

" ಮೀಂಚುಳ್ಳಿ ಎಂಬ ಮಾತಿನಲ್ಲಿ ಎರಡು ಶಬ್ದಗಳಿವೆ, ಮಿಂಚು ಮತ್ತು ಉಳ್ಳಿ ಎಂದು".

" ಮೀಂಚುಳ್ಳಿ ಎಂದರೆ ಮಿಂಚಿನ ಉರುಳಿ ಎಂದು ಆಗುತ್ತದೆ. ಈ ಹಕ್ಕಿ ಬಿಸಿಲಿಗೆ ಎದುರಾಗಿ ಕೂಳಿತಾಗ ನಿಜಕ್ಕೂ ಮಿಂಚಿನ ಉಂಡೆಯಂತೆಯೇ ಹೊಳೆಯುತ್ತಿರುತ್ತದೆ. ಹಾರುವಾಗ ಅದರ ಇಡೀ ದೇಹ ಉರಿ ತಾಕಿದಂತೆ ಫಳಫಳನೆ ಹೊಳೆಯುತ್ತದೆ."

4

ಮುಂದಿನ ಭಾನುವಾರ ಬೇರೆ ಏನೂ ಕೆಲಸವಿಲ್ಲದ್ದರಿಂದ ನಾವು ನನ್ನ ತಮ್ಮ ಇದ್ದ ಆನಂದಪುರಕ್ಕೆ ಹೋದೆವು. ಅಲ್ಲಿ ನನ್ನ ಮಕ್ಕಳು ಬೇರೆ ಏನೂ ಮಾತನಾಡಲು ಬಿಡದೆ ತಾವು ಕಂಡ ಮೀಂಚುಳ್ಳಿಯ ವಿಷಯವನ್ನೇ ತಮ್ಮ ಚಿಕ್ಕಪ್ಪನಿಗೆ ಹೇಳುತ್ತಿದ್ದರು.

ಮಾರನೆಯ ದಿನ ಬೆಳಗ್ಗೆ ಒಂಬತ್ತಕ್ಕೆ ನಾವು ಆನಂದಪುರದ ಹೊರವಲಯದ ಕೆರೆಯದಂಡೆಗೆ ಬಂದಿದ್ದೆವು. ಕೆರೆಯಲ್ಲಿ ಸಾಕಷ್ಟು ನೀರಿತ್ತು. ಬಲು ಸ್ವಚ್ಛವಾದ ಕೆರೆ. ಅಲ್ಲೊಂದು ಇಲ್ಲೊಂದು ನೀರುಕೋಳಿಗಳು ಗುಳಕ್ ಎಂದು ಇಲ್ಲಿ ಮುಳುಗಿ ಅಲ್ಲಿ ಏಳುತ್ತಿದ್ದುವು. ಆಚೆಯ ದಡದಲ್ಲಿ ನಾಲ್ಕಾರು ಬಕಪಕ್ಷಿಗಳು ಒಂಟಿಗಾಲಲ್ಲಿ ನಿಂತು ಮೀನಿಗಾಗಿ ಧ್ಯಾನ ಮಾಡುತ್ತಿದ್ದುವು. ದಡದ ಕಲ್ಲಿಗೆ ಬಂದು ಅಪ್ಪಳಿಸಿ ತುಳುಕುತ್ತಿದ್ದ ನೀರಿನ ಮೇಲೆ ಬಿಸಿಲು ಬಿದ್ದು ಕೆರೆಯ ಒಂದು ಪಾರ್ಶ್ವವೆಲ್ಲ ರಂಗು ರಂಗಾಗಿ ಕಾಣುತ್ತಿತ್ತು.

ಹುಡುಗರ ಗಮನವೆಲ್ಲ ಬೇರೊಂದು ಕಡೆ ಇತ್ತು. ಅವರ ಸೂಕ್ಷ್ಮದೃಷ್ಟಿ ಮೀಂಚುಳ್ಳಿಯನ್ನು ಹುಡುಕುತ್ತಿತು.

ಅಷ್ಟರಲ್ಲಿ, ಒಂದು ಮೀಂಚುಳ್ಳಿ —

ಕೂತಿದ್ದ ಬಂಡೆಯಿಂದ ಎದ್ದು ನೀರಿನ ಅಲೆಗಳು ತನ್ನ ಕಾಲಿಗೆ ತಗಲುವಂತೆ ಹಾರತೊಡಗಿತು. ಸ್ವಲ್ಪದೂರ ಹೋಗಿ ಅನಂತರ ಅದು ನೀರನ್ನು ಬಿಟ್ಟು ಐದು ಆರು ಅಡಿ ಮೇಲಕ್ಕೆ ಎಗರಿ, ಪಟಪಟನೆ ರೆಕ್ಕೆಯನ್ನು ಬಡಿಯುತ್ತ, ನೀರನ್ನೇ ದೃಷ್ಟಿಸಿ ನೋಡುತ್ತ, ಆಕಾಶದಲ್ಲಿ ಒಂದು ಕ್ಷಣ ನಿಂತಿತು. ಹಾರುವಾಗ ಹಕ್ಕಿ ರೆಕ್ಕೆ ಬಡಿದಂತೆಲ್ಲ ಮುಂದು ಮುಂದೆ ಹೋಗುವುದು ವಾಡಿಕೆ. ರೆಕ್ಕೆಯನ್ನು ಬಡಿದರೂ ಮುಂದಕ್ಕೆ ಹೋಗದೆ, ನೆಲಕ್ಕೆ ಇಳಿಯದೆ ಆಕಾಶದಲ್ಲಿ ಒಂದೇ ಕಡೆ ಹಾಗೆ ನಿಲ್ಲುವುದೆಂದರೆ ಆಶ್ಚರ್ಯವಲ್ಲವೆ! ಹಾಗೆ ಆಕಾಶದಲ್ಲಿ ನಿಂತು ಪಟಪಟನೆ ರೆಕ್ಕೆ ಬಡಿಯುತ್ತಿದ್ದ ಮೀಂಚುಳ್ಳಿ ಸ್ವಲ್ಪ ಹೊತ್ತಿನ ಮೇಲೆ ತನ್ನ ಎರಡೂ ರೆಕ್ಕೆಗಳನ್ನು ಮುಚ್ಚಿಕೊಂಡು, ಕೊಕ್ಕನ್ನು ಕೆಳಮುಖ ಮಾಡಿಕೊಂಡು, ಬಿಲ್ಲಿನಿಂದ ಹೊರಟ ಬಾಣದಂತೆ ನೀರಿನ ಕಡೆ ನುಗ್ಗಿತು. ಛಳಾರನೆ ನೀರು ಕಲಕಿ ಹೋಗುವಂತೆ ಮುಳುಗಿ ಕ್ಷಣಮಾತ್ರದಲ್ಲಿ ಏನನ್ನೋ ಕೊಕ್ಕಿನಲ್ಲಿ ಕಚ್ಚಿಕೊಂಡು ದೂರದ ಬಂಡೆಯತ್ತ ಹಾರಿ ಹೋಯಿತು.

ಅದನ್ನು ನೋಡಿ ರಮಿ ಕೂಗಾಡಿದ್ದೂ ಕೂಗಾಡಿದ್ದೆ.

"ಅಣ್ಣಾ, ಎಷ್ಟು ಚೆನ್ನಾಗಿತ್ತಣ್ಣಾ ಮೀಂಚುಳ್ಳಿ ಮೀನು ಹಿಡಿದದ್ದು. ನೀವು ನೋಡಿದಿರಾ? ಛಳಕ್ಕನೆ ಮುಳುಗಿ ಮೀನು ಹಿಡಿಯಿತು. ಈಗ ನೋಡಿ, ಆ ಬಂಡೆಯ ಮೇಲೆ ಕೂತಿದೆ. ಅಯ್ಯೋ ಇನ್ನೊಂದು ಸಾರಿ ಅದು ಮೀನು ಹಿಡಿಯುವುದನ್ನು ನೋಡಬೇಕು."
— ಹೀಗೆನ್ನುತ್ತ ಅವಳು ಕುಣಿದಾಡಿದಳು.

"ಅಲ್ಲ ರಮಿ, ನೀನು ದಡ್ಡಿ. ನಾವು ಹೇಳಿದಾಗ ಆ ಹಕ್ಕಿ ಬಂದು ಮೀನು ಹಿಡಿಯುವುದಿಲ್ಲ। ಅದು ಹಿಡಿಯುವಾಗ ನಾವು ನಿಂತು ನೋಡಬೇಕು ಅಷ್ಟೆ."

"ಅಲ್ಲ ಅಣ್ಣಾ, ಮೀಂಚುಳ್ಳಿ ಹೇಗೆ ಆಕಾಶದಲ್ಲಿ ಒಂದೇ ಕಡೆ ನಿಂತಿತ್ತು ನೋಡಿ!"

"ರಮಿ, ಮೀಂಚುಳ್ಳಿ ಎಂದರೆ ದೇವರು ಮಾಡಿರುವ ಹ್ಯಾಲಿಕಾಪ್ಟರ್ ವಿಮಾನ. ತಿಳಿಯಿತೆ!

"ಸರಿ ಅಣ್ಣಾ, ಅದು ಮೀನನ್ನು ಹೇಗೆ ತಿನ್ನುತ್ತದೆ?

"ಅದು ಮೀನನ್ನು ತಿನ್ನುವುದಿಲ್ಲ. ನೀನು ಬಾಳೆಯ ಹಣ್ಣನ್ನು ಗುಳಕ್ಕನೆ ನುಂಗುತ್ತೀಯಲ್ಲ ಹಾಗೆ ಅದು ಮೀನನ್ನು ಗುಳುಂ ಎಂದು ನುಂಗಿಬಿಡುತ್ತದೆ. ಮೀಂಚುಳ್ಳಿ ಮೀನನ್ನು ಕಚ್ಚಿಕೊಂಡು ಹಾರಿ ಹೋಗಿ ದೂರದ ಒಂದು ಬಂಡೆಯ ಮೇಲೆ ಕೂರುತ್ತದೆ. ಕೊಕ್ಕಿನಲ್ಲಿ ಅಡ್ಡಲಾಗಿ ಕಚ್ಚಿಕೊಂಡಿರುವ ಮೀನನ್ನು ಚಂಗನೆ ಮೇಲಕ್ಕೆ ಎಸೆಯುತ್ತದೆ. ಅದು ಕೆಳಕ್ಕೆ ಬರುವಾಗ ಆ ಎಂದು ಕೊಕ್ಕನ್ನು ಅಗಲಿಸಿ ಉದ್ದುದ್ದವಾಗಿ ಮೀನನ್ನು ನುಂಗುತ್ತದೆ."

"ಮೀನು ಬಹಳ ದೊಡ್ಡದಾಗಿದ್ದರೆ?"

"ಆಗ ಒಂದೆ ಉಂಡೆಯಾಗಿ ಅದನ್ನು ನುಂಗಲಾಗುವುದಿಲ್ಲ.ಮೀಂಚುಳ್ಳಿ ಅಂಥ ಮೀನನ್ನು ಬಂಡೆಗೆ ನಾಲ್ಕಾರು ಸಲ ಹೊಡೆಯುತ್ತದೆ. ಆನೆ ತನ್ನ ಸೊಂಡಿಲಲ್ಲಿ ಸೊಪ್ಪು ಸದೆಯನ್ನು ಎತ್ತಿಕೊಂಡು ಪಟಪಟ ಅಂತ ತನ್ನ ಕಾಲುಗಳಿಗೆ ಹೊಡೆದುಕೊಳ್ಳುತ್ತದಲ್ಲ, ಹಾಗೆ. ಆ ರೀತಿ ಮೀನನ್ನು ಹರಿದು ತಿನ್ನುತ್ತದೆ."

"ಪ್ರತಿ ಸಾರಿಯೂ ಖಂಡಿತವಾಗಿ ಅದಕ್ಕೆ ಮೀನು ಸಿಕ್ಕುತ್ತೆ ಅಂತ ಏನು ಗೊತ್ತು ? ಗುರಿ ತಪ್ಪಿದರೆ?"

"ಸಾಮಾನ್ಯವಾಗಿ ಅದು ಗುರಿ ತಪ್ಪುವುದಿಲ್ಲ. ಆದಿಮಾನವ ಬೇಟೆಯಾಡುತ್ತಿದ್ದಾಗ ತನ್ನ ಕೈಯ ಭರ್ಜಿಯಿಂದ ಹರಿವ ನೀರಿನಲ್ಲಿ ಓಡಾಡುತ್ತಿದ್ದ ಮೀನನ್ನು ಚುಚ್ಚಿ ಹಿಡಿಯುತ್ತಿದ್ದ. ಸಾಮಾನ್ಯವಾಗಿ ಅವನ ಗುರಿ ತಪ್ಪುತ್ತಿರಲಿಲ್ಲ. ಪ್ರತಿಸಾರಿ ತಿವಿದಾಗಲೂ ಅವನಿಗೆ ಒಂದು ಮೀನು ಸಿಕ್ಕುತ್ತಿತ್ತು. ಮೀಂಚುಳ್ಳಿಯೂ ಹಾಗೆಯೇ. ಮೀನು ಮೇಲಕ್ಕೆ ಬರುವವರೆಗೂ ಎರಗುವುದಿಲ್ಲ. ಮೀನು ನೀರು ಕಚ್ಚಿದಾಗ ಮಾತ್ರ ಎರಗಿ ಅದನ್ನು ಹಿಡಿಯುತ್ತದೆ.

"ರಮಿ, ಮೀಂಚುಳ್ಳಿ ಎಂದರೆ ಭಗವಂತನ ಭರ್ಜಿ!"

## 5

"ವೇಣು, ಇವತ್ತು ನಿನಗಾಗಿ ಒಂದು ಕಥೆ: ನೀನು ಮಹಾಭಾರತವನ್ನು ಓದಿದ್ದೀಯಲ್ಲ.

ಕಥೆಯ ಕೊನೆಯಲ್ಲಿ ದುರ್ಯೋಧನ ವೈಶಂಪಾಯನ ಸರೋವರದ ಬಳಿ ಬಂದು, ಅದರ ವಿಶಾಲ ಗಂಭೀರ ಜಲರಾಶಿಯ ಮಧ್ಯೆ ಕುಳಿತು ಬಿಡುತ್ತಾನೆ.

ಇತ್ತ ಭೀಮಸೇನ ಉಗ್ರನಾಗಿ ದುರ್ಯೋಧನನನ್ನು ಹುಡುಕುತ್ತ ಕಿರಾತರ ಸೂಚನೆಯಂತೆ ವೈಶಂಪಾಯನ ಸರೋವರದ ತೀರಕ್ಕೆ ಬರುತ್ತಾನೆ.

ಸರೋವರದ ತಿಳಿನೀರಿನ ಮೇಲೆ ಬೀಸಿಬಂದ ಗಾಳಿ ಅವನನ್ನು ಅಪ್ಪಿ ಸ್ವಾಗತಿಸುತ್ತದೆ. ಆಗ —

ಸರೋವರದ ದಡದಲ್ಲಿ ಕೂತಿದ್ದ ಮೀಂಚುಳ್ಳಿಯೊಂದು ಸರ್ರನೆ ಮೇಲಕ್ಕೆ ಹಾರಿ, ಪಟಪಟನೆ ರೆಕ್ಕೆ ಬಡಿಯುತ್ತ ಆಕಾಶದಲ್ಲಿ ಕ್ಷಣಕಾಲ ನಿಂತಿದ್ದು "ಎಲೈ ಭೀಮಸೇನ! ನಿನ್ನ ಸುಯೋಧನ ಈ ಸರೋವರದಲ್ಲಿ ಇಗೋ ಇಲ್ಲಿ ಅಡಗಿ ಕುಳಿತಿದ್ದಾನೆ ನೋಡು" ಎಂದು ಹೇಳುವ ರೀತಿಯಲ್ಲಿ ತಟಕ್ಕನೆ ನೀರಿಗೆ ಎರಗಿ ಒಂದು ಮೀನನ್ನು ಕಚ್ಚಿಕೊಂಡು ಹಾರಿಹೋಯಿತಂತೆ.

ಹೇಗಿದೆ ವರ್ಣನೆ? ಇದು ನಮ್ಮ ಕವಿ ರನ್ನನ ಕಲ್ಪನೆ.

ಸರಿ ಮುಂದೆ ಏನಾಯಿತು ಎಂಬ ವಿಷಯ ನಿನಗೆ ಗೊತ್ತೇ ಇದೆ.

ಒಂದು ಸಾವಿರ ವರ್ಷಗಳ ಹಿಂದೆ ರನ್ನನಿದ್ದ ನಾಡಿನವರು ಈ ಮೀಂಚುಳ್ಳಿಯನ್ನು ಮೀಂಗುಲಿಗ ಹಕ್ಕಿ ಎಂದು ಕರೆಯುತ್ತಿದ್ದರು.

## 6

ಮಾರ್ಗಶಿರ ಮಾಸದಲ್ಲಿ ಒಂದು ದಿನ.

ಸಂಜೆ ಐದು ಗಂಟೆಗೆ ಆಗಲೇ ಚಳಿಚಳಿಯಾಗುತ್ತಿತ್ತು. ಶಿವಮೊಗ್ಗೆಯ ತುಂಗಾನಾಲೆಯ ದಡದ ಕಲ್ಲಿನ ಮೇಲೆ ಕೂತು ಹರಟೆ ಹೊಡೆಯುತ್ತಿರುವಾಗ ಇದ್ದಕ್ಕಿದ್ದ ಹಾಗೆ ವೇಣು ಎದ್ದು ನಿಂತು, 'ಅಣ್ಣಾ ನಾನು ಮೀಂಚುಳ್ಳಿಯ ಗೂಡು ನೋಡಬೇಕು' — ಎಂದು ಕೇಳಿದ. ಹಿಂದೊಂದು ದಿನ ಅದೇ ಜಾಗದಲ್ಲಿ ನೀರು ಕುಡಿಯಲು ಇಳಿದಾಗ ಅಲ್ಲಿನ ಕಲ್ಲುಪೊಟರೆಯೊಂದರಿಂದ ಮೀಂಚುಳ್ಳಿ ಹಾರಿ ಹೋದದ್ದನ್ನು ಅವರು ನೋಡಿದ್ದರಷ್ಟೆ. ಈಗ ಆ ಪೊಟರೆಯಲ್ಲಿ ಏನೇನು ಇದೆ ಎಂದು ತಿಳಿಯಲು ವೇಣು ಕಾತರನಾಗಿದ್ದ.

"ಅಣ್ಣಾ, ಹಾಗಾದರೆ ಒಂದು ಕೆಲಸ ಮಾಡೋಣ. ಮೊದಲು ತಂದಿರುವ ಪುರಿ ಚೌಚೌ ತಿಂದು ಮುಗಿಸೋಣ. ಆಮೇಲೆ ನೀರು ಕುಡಿಯಲು ಹೇಗೂ ನಾಲೆಯಲ್ಲಿ ಇಳಿಯಬೇಕಲ್ಲ ಆಗ ಪೊಟರೆಯನ್ನು ನೋಡಿದರಾಯಿತು" ಎಂದು ರಮಿ ಸೂಚಿಸಿದಳು.

ಪುರಿ ತಿನ್ನುತ್ತ ಕೂತೆವು.

ಆಗ ನಾನು ಅವರಿಗೊಂದು ಕಥೆ ಹೇಳಿದೆ.

"ಬಹಳ ಹಿಂದಿನ ಕಾಲದಲ್ಲಿ ಗ್ರೀಕರು ಮೀಂಚುಳ್ಳಿಯನ್ನು ಹ್ಯಾಲ್ಸಿಯನ್ ಎಂದು ಕರೆಯುತ್ತಿದ್ದರು. ಹ್ಯಾಲ್ಸಿಯನ್ ಎಂದರೆ ಶಾಂತಿಯ ಹಕ್ಕಿ, ಕ್ಷೇಮದ ಹಕ್ಕಿ ಎಂದು ಅರ್ಥ. ಅದಕ್ಕೆ ಆ ಹೆಸರು ಹೇಗೆ ಬಂತು ಎನ್ನಲು ಒಂದು ಕಥೆ ಇದೆ, ಹೇಳುತ್ತೇನೆ ಕೇಳಿ:

ವಾಯುದೇವರ ಮಗಳಿಗೆ ಲಗ್ನವಾಯಿತು. ಮದುವೆ ಆದ ಮೇಲೆ ಮಗಳು ಅಳಿಯ ಹೊಸ ಮನೆ ಮಾಡಿ, ಹೊಸ ಸಂಸಾರ, ಹೂಡಿ ಜೀವನ ಮಾಡಬೇಕಲ್ಲ. ಆ ಸಂಭ್ರಮದಲ್ಲಿರುವಾಗ ಜ್ಯೂಸ್ ದೇವತೆ ಮಗಳು ಅಳಿಯನಿಗೆ ನೀವು ಮೀಂಚುಳ್ಳಿ ಹಕ್ಕಿಗಳಾಗಿ ಎಂದು ಶಾಪ ಕೊಟ್ಟನಂತೆ. ತಕ್ಷಣವೇ ನೂತನ ವಧುವರರು ಪುಟ್ಟ ಪುಟ್ಟ ಎರಡು ಮೀಂಚುಳ್ಳಿ ಹಕ್ಕಿಗಳಾಗಿ ಹಾರಿಹೋದುವಂತೆ. ಅವಕ್ಕೆ ಸಮುದ್ರವೇ ವಾಸಸ್ಥಾನವಾಯಿತು. ನೀರಿನ ಮೇಲೆ ಹಾರುವುದು, ಮೀನುಗಳನ್ನು ಹಿಡಿದು ತಿನ್ನುವುದು, ಇದೇ ಅವುಗಳ ಕೆಲಸವಾಯಿತು.

ಹೀಗೆಯೆ ಇರಬೇಕಾದರೆ ಹೆಣ್ಣು ಹಕ್ಕಿ ಗರ್ಭಿಣಿಯಾಯಿತು. ಹೆಣ್ಣು ಮೊಟ್ಟೆ ಇಡುವ ಕಾಲಕ್ಕೆ ಗಂಡು ಹಕ್ಕಿ ಗೂಡು ಕಟ್ಟಬೇಕಷ್ಟೆ. ಆದರೆ ಸಮುದ್ರದ ನೀರಿನ ಮೇಲೆ ಗೂಡು ಕಟ್ಟುವುದಕ್ಕಾಗುತ್ತದೆಯೇ? ಒಂದು ವೇಳೆ ಕಟ್ಟಿದರೂ ಅಲೆಗಳು ಅಪ್ಪಳಿಸಿದುವೆಂದರೆ ಗೂಡು ಕೊಚ್ಚಿಹೋಗುತ್ತದೆ. ಭೋರೆಂದು ಬಿರುಗಾಳಿ ಬೀಸಿದಾಗ ಮೊಟ್ಟೆಗಳೆಲ್ಲ ನೀರು ಪಾಲಾಗುತ್ತವೆ.

ಆಗ ವಾಯುದೇವ ಅಳಿಯ ಮಗಳಿಗೆ ಒಂದು ದಿವ್ಯವಾದ ವರ ಕೊಟ್ಟನಂತೆ. ಸಮುದ್ರದಲ್ಲಿ ಎಂಥ ಉಬ್ಬರ ಇಳಿತಗಳಿರಲಿ, ಬಿರುಗಾಳಿ ಬೀಸಿ ಅಲೆಗಳು ಅಪ್ಪಳಿಸುತ್ತಿರಲಿ, ಅವೆಲ್ಲವನ್ನೂ ಅಡಗಿಸಿ ಶಾಂತವನ್ನಾಗಿ ಮಾಡುವ ಶಕ್ತಿ ವಾಯುದೇವರ ವರದಿಂದ ಆ ಪುಟ್ಟ ಹಕ್ಕಿಗಳಿಗೆ ಲಭಿಸಿತಂತೆ.

ಸರಿ, ಹೇಳುವುದೇನಿದೆ. ಇದ್ದಕ್ಕಿದ್ದ ಹಾಗೆ ಸಮುದ್ರವೆಲ್ಲ ಶಾಂತವಾಯಿತು. ವರ್ಷದ ಅತಿ ಚಿಕ್ಕ ದಿನ ಬರಲು ಇನ್ನೂ ಏಳು ದಿನಗಳ ಅವಕಾಶವಿತ್ತು. ಎದ್ದು ಕುಣಿಯುತ್ತಿದ್ದ ಸಮುದ್ರ ನಿದ್ದೆಮಾಡತೊಡಗಲು ಗಂಡು ಹಕ್ಕಿ ಸಮುದ್ರದ ನೀರಿನ ಮೇಲೆ ಒಂದು ಗೂಡುಕಟ್ಟಿತು.

ವರ್ಷದಲ್ಲಿ ಅತಿ ಚಿಕ್ಕ ದಿನ ಎಂದರೇನು ಎಂದು ನಿಮ್ಮ ಪ್ರಶ್ನೆ ಅಲ್ಲವೆ? ಹೇಳುತ್ತೇನೆ ಕೇಳಿ. ಡಿಸೆಂಬರ್ ತಿಂಗಳ ಇಪ್ಪತ್ತ ಎರಡನೆಯ ತಾರೀಖಿನ ದಿನ ಹಗಲು ತೀರ ಕಡಿಮೆ. ಅರ್ಧಮುಕ್ಕಾಲು ಗಂಟೆ ಮುಂಚೆಯೇ ಸೂರ್ಯ ಮುಳುಗಿಬಿಡುತ್ತಾನೆ. ಆದ್ದರಿಂದ

ಅದನ್ನು ವರ್ಷದ ಅತಿ ಚಿಕ್ಕ ದಿನವೆಂದು ಕರೆಯುತ್ತಾರೆ. ಆ ದಿನಕ್ಕೆ ಒಂದು ವಾರ ಮೊದಲು ಮತ್ತು ಒಂದು ವಾರದ ಅನಂತರ — ಒಟ್ಟು ಹದಿನೈದು ದಿನಗಳು ಸಮುದ್ರದಲ್ಲಿ ಏರಿಳಿತಗಳು ಇರುವುದಿಲ್ಲ. ಅಲೆಗಳ ಹೊಡೆತ ಕಡಿಮೆ. ಬಿರುಗಾಳಿ ಬೀಸುವುದಿಲ್ಲ. ಸಮುದ್ರ ಆಗ ಸಹಜವಾಗಿ ಶಾಂತವಾಗಿರುತ್ತದೆ. ಇದಕ್ಕೆ ಮೀಂಚುಳ್ಳಿಯೇ ಕಾರಣ ಎಂದು ಗ್ರೀಕರು ನಂಬಿದ್ದರು."

"ಎಲ್ಲಿ, ಈಗ ಎಲ್ಲರೂ ಹೋಗೋಣ. ಗೂಡು ನೋಡಿ ಬರೋಣ" ಎಂದವನೆ ಅವರೊಂದಿಗೆ ನಾಲೆಯ ಕಡೆ ಹೊರಟೆ.

ಮೀಂಚುಳ್ಳಿಯ ಪೊಟರೆ ಸ್ವಲ್ಪ ಆಳವಾಗಿಯೇ ಇತ್ತು. ಒಳಗೆ ಕತ್ತಲು. ಏನೂ ಕಾಣುವಂತಿರಲಿಲ್ಲ. ಬೆಂಕಿಕಡ್ಡಿಯನ್ನು ಗೀರಿ ಒಳಗೇನಿದೆಯೋ ಎಂದು ಇಣಿಕಿ ನೋಡಿದೆವು. ಒಂದು ಅಡಿಯಷ್ಟು ಒಳಭಾಗದಲ್ಲಿ ಏನೋ ಮಸುಕಾಗಿ ಕಂಡಿತು. ಏನೆಂಬುದು ತಿಳಿಯಲಿಲ್ಲ.

ಪಚ್ಚಿ ಪಕ್ಕದಲ್ಲಿ ಬೆಳೆದಿದ್ದ ಒಂದು ಒಣಗಿದ ಪುಳ್ಳಿಯನ್ನು ಮುರಿದುಕೊಂಡು ಅದರಿಂದ ಗೂಡನ್ನು ಕೆದಕಿ ನೋಡಿದಳು.

"ಅಣ್ಣಾ, ಪೊಟರೆಯಲ್ಲಿ ಗಬ್ಬುನಾತ. ಥೂ, ಮೀನಿನ ವಾಸನೆ ಬರ್‍ತಾ ಇದೆ" ಎಂದಳು ಪಚ್ಚಿ.

"ಗಬ್ಬುನಾತವೇನೋ ಇರಬಹುದು. ಆದರೆ ಅದು ಮೀನಿನ ವಾಸನೆ ಎಂದು ನಿನಗೆ ಹೇಗೆ ಗೊತ್ತು? ನೀನು ಯಾವತ್ತಾದರೂ ಮೀನು ತಿಂದಿದ್ದೀಯ?" ಎಂದು ವೇಣು ಕೇಳಿದ.

"ಥೂ ಮೀನು ಯಾರಾದರೂ ತಿಂತಾರೇನೋ? ಏನೋ ಒಂದು ಥರ ಗಬ್ಬು ವಾಸನೆ ಬರ್‍ತಾ ಇದೆ" ಎಂದಳು ಪಚ್ಚಿ.

"ತಿನ್ನದೆ ಏನು! ನಿನ್ನ ಹೆಸರೇ ಮೀಂಚುಳ್ಳಿ ಅಲ್ಲವೆ? ನೀನು ತಿನ್ನೋದೆಲ್ಲ ಮೀನೆ" ಎಂದು ಸಮಯ ನೋಡಿ ಕುಕ್ಕಿದಳು ರಮಿ.

ಪುಳ್ಳಿಯಿಂದ ಗೂಡನ್ನು ಕೆದಕಿದಾಗ ನಾಲ್ಕಾರು ಮೀನಿನ ಮೂಳೆಗಳು ಬೆಳ್ಳಗೆ ಹೊರಬಂದದ್ದನ್ನು ಕಂಡು ಪಚ್ಚಿಗೆ ತುಂಬ ಸಂತೋಷ, ತನ್ನ ಊಹೆ ನಿಜವಾಯಿತು ಎಂದು.

ನಾನು ಹೇಳಿದೆ.

"ನೋಡು ಪಚ್ಚಿ, ಕಾಗೆ ಕಡ್ಡಿಗಳಿಂದ ಗೂಡು ಕಟ್ಟುತ್ತದೆ. ಗುಬ್ಬಿ, ಹುಲ್ಲು ಹತ್ತಿ ಇವುಗಳಿಂದ ಗೂಡು ಕಟ್ಟುತ್ತದೆ. ಹಾಗೆ ಮೀಂಚುಳ್ಳಿ ಮೀನಿನ ಮೂಳೆಯಿಂದಲೇ

ಗೂಡು ಕಟ್ಟುತ್ತದೆ. ಅದರ ಮೇಲೆ ಮಲಗುತ್ತದೆ. ಅಲ್ಲೇ ಮೊಟ್ಟೆ ಇಡುತ್ತದೆ. ಅಲ್ಲೇ ಮರಿ ಮಾಡುತ್ತದೆ. ಹುಟ್ಟಿದ ಮರಿಗಳಿಗೆ ಪುಟ್ಟ ಮೀನು, ಹುಳ ಹುಪ್ಪಟೆ ತಿನ್ನಿಸುತ್ತದೆ. ಹೀಗೆ ಯಾರಾರು ಎಲ್ಲೆಲ್ಲಿ ಬೆಳೆಯುತ್ತಾರೊ ಅಲ್ಲಲ್ಲಿಗೆ ಹೊಂದಿಕೊಳ್ಳಬೇಕು."

"ಅಣ್ಣಾ ಈ ಗೂಡಿನಲ್ಲಿ ಮೊಟ್ಟೆಗಳೂ ಇಲ್ಲ, ಮರಿಗಳೂ ಇಲ್ಲ. ನನಗೆ ಮೀಂಚುಳ್ಳಿ ಮರಿಗಳನ್ನು ನೋಡಬೇಕೆಂದು ತುಂಬ ಆಸೆ" ಎಂದಳು ಪಚ್ಚಿ.

ಅದಕ್ಕೆ ನಾನು, "ಸರಿ ಸರಿ, ಮೊಟ್ಟೆಯೂ ಬೇಡ, ಮರಿಯೂ ಬೇಡ. ಹೊರಡಿ ಮನೆಗೆ ಹೋಗೋಣ. ಇನ್ನು ಮೀಂಚುಳ್ಳಿಯ ವಿಷಯ ಸಾಕು. ಪ್ರಪಂಚದಲ್ಲಿ 8650 ಬಗೆಯ ಹಕ್ಕಿಗಳಿವೆ. ಅವುಗಳಲ್ಲಿ ನೀವು ಈಗ ಒಂದನ್ನು ಮಾತ್ರ ನೋಡಿ ತಿಳಿದಿರಿ. ಮುಂದಿನ ವಾರ ತೀರ್ಥಹಳ್ಳಿಗೆ ಹೋಗೋಣ. ಅಲ್ಲಿನ ಕಾಡಿನಲ್ಲಿ ನಿಮಗೆ ನವಿಲುಗಳನ್ನು ತೋರಿಸುತ್ತೇನೆ" ಎಂದೆ.

"ಹು, ಹಾಗೆಯೇ ಮಾಡೋಣ. ನನಗೆ ನವಿಲನ್ನು ಕಂಡರೆ ತುಂಬ ಆಸೆ" ಎಂದು ಕೇಕೆ ಹಾಕುತ್ತ ರಮಿ ಕುಣಿಯತೊಡಗಿದಳು.

## 10

# ತೋಳ ಮತ್ತು ತುಂಟಿ

ದೀಪಿಕಾ ಬಿ.ಎಸ್. ರುಕ್ಕಮ್ಮ

ನಮ್ಮ ಪಾಪು ದೀಪಿಕ ಈಗ ನಾಲ್ಕುವರೆ ವರುಷಗಳ ಪೋರಿ. ಸ್ವಲ್ಪ ಪುಂಡಾಟಿಕೆ ಈಗ ಅವಳಿಗೆ ಬಂದಿದೆ. ನಮ್ಮ ಗದರಿಕೆಯಿಂದ ಅವಳ ಮೇಲೆ ಯಾವ ಪರಿಣಾಮವೂ ಆಗುತ್ತಿಲ್ಲ. ಪುಸಲಾವಣೆಗೆ ಅವಳು ಕಿವಿಗೊಡುವುದನ್ನು ನಿಲ್ಲಿಸಿಬಿಟ್ಟಿದ್ದಾಳೆ. ಸಂಜೆ ಅವಳಿಗೆ ಜಡೆ ಹೆಣೆಯಬೇಕು, ಮಡಿ ಲಂಗ ಹಾಕಿ, ಶಿಸ್ತು ಮಾಡಬೇಕು ಎಂದರೆ ಹೊಸ ಹೊಸ ಉಪಾಯಗಳನ್ನು ಹುಡುಕಬೇಕು. ಒಂದು ದಿನ ನನಗೆ ಸಾಕಾಗಿ, "ಆಚೆ ಬೀದಿಯಲ್ಲಿ ಒಬ್ಬ ಕೊಳಕು ಹುಡುಗಿ ಇದ್ದಳು. ತಲೆ ಬಾಚಿಕೊಳ್ಳದೆ, ಮುಖ ತೊಳೆದು ಮಡಿ ಬಟ್ಟೆ ಹಾಕಿಕೊಳ್ಳದೆ ಬೀದಿಯಲ್ಲಿ ಕುಣಿಯುತ್ತಿದ್ದಳು. ಅವಳನ್ನು ತೋಳ ಹಿಡಿದುಕೊಂಡು ಹೋಯಿತು" ಎಂದುಬಿಟ್ಟೆ. ದೀಪಿಕ ಕಾತರಗೊಂಡಳು. ನನ್ನ ಮುಂದೆ ತಲೆ ಬಾಚಿಸಿಕೊಳ್ಳಲು ಕುಳಿತಳು.

"ಇಲ್ಲೆಲ್ಲಿಂದ ಬರತ್ತೆ ತೋಳ?" ಎಂದು ಕೇಳಿದಳು.

"ಚಾಮುಂಡಿ ಬೆಟ್ಟದಲ್ಲಿ ಗುಹೆಗಳಿರುತ್ತೆ. ಅಲ್ಲಿ ತೋಳ ಮರಿಗಳ ಜೊತೆಯಲ್ಲಿ ವಾಸ ಮಾಡುತ್ತೆ."

"ಮತ್ತೆ ನಾವು ಹೋಗಿದ್ವಲ್ಲ ಅವಾಗ ಒಂದೂ ಕಾಣಲೇ ಇಲ್ಲ?"

"ರಾತ್ರಿ ಹೊತ್ತು ಓಡಾಡುತ್ತೆ. ಬೆಳಗಿನ ಹೊತ್ತು ಮರೆಯಲ್ಲಿದ್ದು ಗಿಡದ ಹಿಂದೆ ನಿಂತುಕೊಂಡು ಹಾರಿಬಂದು ಎತ್ತಿಕೊಂಡು ಹೋಗುತ್ವೆ."

"ಎತ್ತಿಕೊಂಡು ಹೋಗಿ ಏನು ಮಾಡುತಾವಮ್ಮ?" ಎಂದು ಕಳವಳಿಸಿದಳು ಪಾಪು. ಅವಳ ಭಯವನ್ನು ಕಂಡು ನನಗೆ ಮರುಕವಾಯಿತು.

"ಎತ್ತಿಕೊಂಡು ಹೋಗಿ ಮನೆಕೆಲಸ ಮಾಡಿಸುತ್ವೆ. ತನ್ನ ಮರಿಗಳಿಗೆಲ್ಲ ಹಾಲು ಮಾಡಿ ಬಾಟಲಿನಲ್ಲಿ ಕುಡಿಸು ಎನ್ನುತ್ವೆ. ಬಾಟಲನ್ನು ಬಿಸಿ ನೀರು ಹಾಕ್ಕೊಂಡು ಬ್ರಶ್ನಲ್ಲಿ ತೊಳಿ ಎನ್ನುತ್ವೆ. ಪಾಪನ ಮೂಗು ಒರೆಸು, ಅಂಗಿ ಹಾಕು, ಬಟ್ಟೆ ಒಗಿ, ಮನೆ ಕಸ ಗುಡಿಸು, ಪಾತ್ರೆ ಬೆಳಗು ಅಂತೆಲ್ಲ ಕೆಲಸ ಹಚ್ಚುತ್ವೆ."

"ಮಾಡದೆ ಇದ್ದರೆ?"

"ಮಾಡದೆ ಇದ್ದರೆ ಊಟಾನೇ ಹಾಕಲ್ಲ. ಹಲ್ಲು ತೋರಿಸಿ ಹೆದರಿಸಿ ಬಿಡುತ್ತವೆ?" (ಇನ್ನೇನ್ನು ತಾನೆ ಹೇಳಲಿ?)

"ಅಬ್ಬಬ್ಬಾ..." ಎನ್ನುತ್ತ ಸುಮ್ಮನಾದಳು ನಮ್ಮ ಹುಡುಗಿ. ಮರುದಿನ ತಾನಾಗಿ ತಲೆ ಬಾಚಿಸಿಕೊಳ್ಳಲು ಬಂದಳು. "ನಾನು ಹೇಳುವ ಕಥೆ ಸ್ವಲ್ಪ ಕೇಳಮ್ಮ" ಎಂದಳು.



ಒಂದು ಕೊಳಕು ಹುಡುಗಿ ಇದ್ದಳಂತೆ. ತಲೆ ಕೆದರಿಕೊಂಡು ಬೀದಿಯಲ್ಲಿ ಆಡುತ್ತ ಇದ್ದಳಂತೆ. ಮುಖದಲ್ಲಿ ಕೊಳೆ, ಲಂಗದಲ್ಲಿ ಕೊಳೆ ಮಾಡಿಕೊಂಡು ಆಡ್ತಾ ಇದ್ದಳಂತೆ. ತೋಳ ಬಂದು ಅವಳನ್ನು ಹಿಡಿದುಕೊಂಡು ಹೋಯಿತಂತೆ..."

ನಾನು ಯಾಂತ್ರಿಕವಾಗಿ 'ಹುಂ' ಎಂದೆ.

"ಹಿಡಿದುಕೊಂಡು ಹೋಗಿ ಮನೆ ಕೆಲಸ ಎಲ್ಲ ಮಾಡು ಅಂತ ಹೇಳಿತಂತೆ. ಪಾತ್ರೆ ಬೆಳಗು, ಕಸಗುಡಿಸು, ಹಾಲು ಮಾಡು, ಪಾಪನ್ನ ಆಡಿಸು ಅಂತ ಹೇಳಿತಂತೆ."

ನನಗೆ ನಗು ಬಂದಿತು. ಆದರೂ ನಗದೆ 'ಹುಂ' ಎಂದೆ.

"ಆಗ ಆ ಹುಡುಗಿ ಆಗಲಿ ನನಗೆ ಇದೆ ಇಷ್ಟ. ನಾನು ಮನೆಗೆ ಹೋಗಲ್ಲ. ಇಲ್ಲೇ ಕೆಲಸ ಮಾಡಿಕೊಂಡು ಇರ್ತೀನಿ ಅಂದಳಂತೆ."

ನಾನು ಬೆರಗಾಗಿ ಕಣ್ಣು ಬಿಟ್ಟೆ.

"ಆಗ ತೋಳ ಆ ಹುಡುಗೀನ ಮಿಕ ಮಿಕಾಂತ ನೋಡ್ತಾ ಇತ್ತಂತೆ" ಎಂದು ನಕ್ಕಳು ಕಿಲಾಡಿ.

Printed by Bengal Offset Works, New Delhi-5